*Madras University Publications*
*Kanarese Series No. 2.*

# RASA RATNAKARA

**SALVA—**

ಕವಿಸಾಳ್ವ ಕೃತಮಪ್ಪ

# ರಸರತ್ನಾಕರಂ

EDITED BY

A. VENKATA RAO, B.A., L.T.,
*Head of the Kanarese Department,*

AND

PANDIT H. SESHA AYYANGAR,
*Junior Lecturer in Kanarese,*
*University Institute of Oriental Studies and Research,*
*Madras.*




PRINTERS:
ANANDA PRESS, MADRAS.

1932

Price Rs. 2/8

# ಅವತರಣಿಕೆ



ಇದು ಕಾವ್ಯನಾಟ್ಯನಿಷ್ಠಗಳಾದ ಶೃಂಗಾರಾದಿನವರಸಗಳನ್ನು ಕನ್ನಡದಲ್ಲಿ ಪ್ರತಿಪಾದಿಸುವ ಗ್ರಂಥವು. ಇದಕ್ಕೆ "**ರಸರತ್ನಾಕರ**" ವೆಂದು ಹೆಸರು. ಇದನ್ನು ಬರೆದವನು "ಕವಿಸಾಳ್ವ" ನೆಂಬವನು.

ಇದುವರೆಗೆ ದೊರೆತಿರುವ ಕನ್ನಡಭಾಷೆಯ ಅಲಂಕಾರಗ್ರಂಥಗಳಲ್ಲಿ ರಸ ವಿಷಯವನ್ನು ವಿಸ್ತರದಿಂದ ಪ್ರತಿಪಾದಿಸುವ ಗ್ರಂಥವು ಇದೊಂದೇ. **ನಾಗವರ್ಮ**ನು ತನ್ನ "**ಕಾವ್ಯಾವಲೋಕನದ**" ಒಂದು ಪ್ರಕರಣದಲ್ಲಿ ನವರಸಗಳನ್ನೂ ಸಂಗ್ರಹವಾಗಿ ಮಾತ್ರ ವಿವರಿಸಿರುವನು. **ಕವಿಕಾಮನು** "**ಶೃಗಾರರತ್ನಾಕರ**" ವೆಂಬ ಗ್ರಂಥದಲ್ಲಿ ಶೃಂಗಾರರಸವನ್ನು ಮಾತ್ರ ವಿಸ್ತರವಾಗಿಯೂ, ಮತ್ತಿನ ರಸಗಳನ್ನು ಸಂಗ್ರಹವಾಗಿಯೂ ವಿವರಿಸಿರುವನು. ಇವರಿಬ್ಬರೂ ಪ್ರಾಚೀನಮತವನ್ನನುಸರಿಸಿದವರು. ಈಗ್ರಂಥಕರ್ತೃವು ಮೇಲೆಹೇಳಿದ ಗ್ರಂಥಗಳಲ್ಲಿನ ಕೊರತೆಯನ್ನು ತಿಳಿದು ಅದನ್ನು ಹೋಗಲಾಡಿಸಲು ಈ ಗ್ರಂಥವನ್ನು ಬರೆದಿರುವನು.

ಈ ಗ್ರಂಥವನ್ನು ಬರೆದ ಕವಿಯೇ ತನ್ನ ಹೆಸರನ್ನೂ, ಗ್ರಂಥದ ಹೆಸರನ್ನೂ, ಈ ಗ್ರಂಥದ ಪೀಠಿಕೆಯ :—

ಮ|| ವಸುಧಾಚಕ್ರದೊಳೊಪ್ಪುತಿರ್ಪ ಜಸವಂತಂ ಜಿನಾಧೀಶಪಾ |
ದಸರೋಜಾತಮುಪಾಳಿ ಶಬ್ದಸದಲಂಕಾರಾದಿಶಾಸ್ತ್ರಜ್ಞರೊ |
ಲ್ದು ಸಭಾರಂಜನವಾಣಿ ರಾಜಬುಧಮಾನ್ಯಂ ಮಾರ್ಗಸಾರಂಗಳಿಂ |
**ರಸರತ್ನಾಕರ**ಮಂ ಸಮಂತು **ಕವಿಸಾಳ್ವಂ** ಪೇಳ್ದನೊಳ್ಪೆಂಬಿನಂ ||

I. 5.

ಎಂಬ ಪದ್ಯದಲ್ಲಿಯೂ, ಗ್ರಂಥಾಂತ್ಯದ,

ಕಂ|| ಇಂದುವರಮಾರುಮೀ ತೆಱ |
ದಿಂದಂ ಕನ್ನಡದೊಳಾರ್ಯರಾ ಎಂಬಿನವೊ ||
ಳ್ಪಿಂದೆ ವಿವರಿಸಿದುದಿಲ್ಲೆನೆ |
ಚಂದದೆ ಬಿಚ್ಚಳಿಸಿ ರಚಿಸಿದಂ **ಕವಿಸಾಳ್ವಂ** || 4-268

ಈಕೃತಿ ಕವಿಕೃತನುತಕವಿ ।
ತಾಕಾಂತೆಗೆ ತಾನೆ ನವರಸಂ ಸಲೆ ರಸರ ॥
ತ್ನಾಕರಮಿಳೆಶತಿರವಿರ ।
ತ್ನಾಕರಮಿರ್ಪನ್ನೆಗಂ ಜಯಿಕ್ಕುರ್ವರೆಯೊಳ್ ॥ 4-269

ಈ ಪದ್ಯಗಳಲ್ಲಿಯೂ

ಇದು "ಶತೇಂದ್ರಮುನೀಂದ್ರವಂದಿತಾರ್ಹತ್ಪರಮೇಶ್ವರ ಪಾದಾರವಿಂದಾ ಮಂದಮಕರಂದಾನಂದಿತಭೃಂಗಾಯಮಾಣಕವಿಸಾಳ್ವ ವಿರಚಿತಮಪ್ಪ ರಸರತ್ನಾಕರದೊಳ್" ಎಂಬ ಗದ್ಯಭಾಗಗಳಲ್ಲಿಯೂ, ಕಂಠೋಕ್ತವಾಗಿ ತಿಳಿಸಿರುವುದರಿಂದ ಇವುಗಳ ವಿಷಯದಲ್ಲಿ ವಾದವಿವಾದಗಳಿಗೆ ಯಾವಬಗೆಯಲ್ಲಿಯೂ ಅವಕಾಶವಿಲ್ಲ.

ಈ ಕವಿಯು ಜೈನಮತದ ಸಂಪ್ರದಾಯವನ್ನನುಸರಿಸಿ ತನ್ನ ಇಷ್ಟದೇವತಾಸ್ತುತಿರೂಪವಾದ ಮಂಗಳಪದ್ಯಗಳಲ್ಲಿ ಅರ್ಹಂತನನ್ನೂ, ಬಳಿಕ ಸರಸ್ವತಿಯನ್ನೂ ಸ್ತುತಿಸಿ "ಶತೇಂದ್ರ... ...ಕವಿಸಾಳ್ವ" ಎಂದು ಪ್ರಕರಣಾಂತ್ಯಗದ್ಯಭಾಗಗಳಲ್ಲಿ ತಾನು ಅರ್ಹದ್ಭಕ್ತನೆಂದು ಹೇಳಿಕೊಂಡಿರುವುದರಿಂದ ಈತನು ಜೈನಮತಾವಲಂಬಿಯೆಂದು ಸ್ಪಷ್ಟವಾಗಿ ಕಂಡುಬರುವುದು. ಇವನ ಹೆಸರು, ಮತ, ಇವೆರಡನ್ನುಬಿಟ್ಟರೆ, ಇವನ ಕಾಲ, ದೇಶ, ವೃತ್ತಿ, ಇವನು ರಚಿಸಿದ ಇತರ ಗ್ರಂಥಗಳು, ಮೊದಲಾದುವನ್ನು ತಿಳಿಯಲು ಈ ಗ್ರಂಥದಲ್ಲಿ ಆವ ವಿಧವಾದ ಸೂಚನೆಯೂ ಕಂಡುಬರುವುದಿಲ್ಲ. ಈತನ ವಿಷಯದಲ್ಲಿ, ಕರ್ಣಾಟಕಕವಿಚರಿತ್ರಕಾರರು ಕವಿಚರಿತ್ರೆಯ ದ್ವಿತೀಯಸಂಪುಟದಲ್ಲಿ (ಪುಟಗಳ 243 ರಿಂದ 251 ರ ತನಕ) ವಿಪುಲವಾಗಿ ಬರೆದಿರುತ್ತಾರೆ. ಅದರ ಸಾರಾಂಶವನ್ನು ಇಲ್ಲಿ ಕೊಡುತ್ತೇವೆ.

ಸಾಳ್ವ - ಸುಮಾರು ಕ್ರಿ. ಶ. 1550.

ಈತನು ಭಾರತ, ರಸರತ್ನಾಕರ, ವೈದ್ಯಸಾಂಗತ್ಯ, ಇವುಗಳನ್ನು ಬರೆದಿದ್ದಾನೆ. (1) ಶಾರದಾವಿಲಾಸವೆಂಬ ಗ್ರಂಥವೂ ಏತತ್ಕೃತವೆಂದೇ ತೋರುತ್ತದೆ. ಇವನು ಜೈನಕವಿ. ಇವನತಂದೆ ಧರ್ಮಚಂದ್ರ; ಗುರು ದೇಶಿಗಣದ ವಿಜಯಕೀರ್ತಿಯಮಗ ಶ್ರುತಕೀರ್ತಿ, ಇವನ ಭಾರತದಿಂದ ನಮಗೆ ಈ ವಿಷಯವಾಗಿ ಕೆಲವು ಅಂಶಗಳು ತಿಳಿದು ಬರುವುವು.

---

1 ಕವಿಯು ಈಗ್ರಂಥದ ಉದಾಹರಣಪದ್ಯಗಳಲ್ಲಿ ಸಾಳ್ವಮಲ್ಲನ ಯಶಃಪ್ರತಾಪಗಳನ್ನು ವರ್ಣಿಸುವ ಪದ್ಯಗಳನ್ನು ಉದಾಹರಿಸಿರುವುದರಿಂದ ಈ ಗ್ರಂಥವೂ ಏತತ್ಕೃತವೆಂದು ಊಹಿಸಲು ಅವಕಾಶವುಂಟಾಯಿತು.

"ತೌಳವ, ಹೈವ, ಕೊಂಕಣ ದೇಶಾಧಿನಾಥನೂ, ಲಕ್ಷ್ಮಿಯಪುತ್ರನೂ, ಅಭಿನವನಿಂಬನೂ ಆದ ಮಹಾಮಂಡಲೇಶ್ವರ **ಭೈರವರಾಯನು ನಗಿರನಗರದಲ್ಲಿ** ಆಳುತ್ತಿದ್ದನು. ಅವನಿಗೂ, ಮಹಿಷಿ **ನಾಗಲಾಂಬಿಕೆಗೂ ಸಂಗನೆಂಬ**ಮಗನು ಹುಟ್ಟಿದನು. ಭೈರವರಾಯನು ಸತ್ತಬಳಿಕ, ಅವನತಮ್ಮ **ಚಿಕ್ಕಭೈರವರಾಯನು** ಆಳಿದನು. (ಸಂಗನ ವಿಷಯವನ್ನು ಹೇಳಿಲ್ಲ). ಇವನ ಚಿಕ್ಕಮ್ಮನಾದ **ಶಂಕಾಂಬಿಕೆಗೂ,** ಚಂದ್ರವಂಶದ **ಬೈಯನೃಪನಿ**ಗೂ, **ಮಲಿದೇವಿ**ಯೆಂಬಮಗಳೂ, **ವಸುದಾನಮೇರು**ವೆಂಬ ಮಗನೂ ಹುಟ್ಟಿದರು. ವಸುದಾನಮೇರುವು **ಸಾಳ್ವಮಲ್ಲ**ನೆಂಬ ಹೆಸರಿನಿಂದ ಆಳಿದನು ಇವನಿಗೆ "ಕವಿಸರೋವರರಾಜಹಂಸ," "ಜಿನಧರ್ಮಧ್ವಜ," "ತ್ರಿಭುವನ ಕಠಾರಿತ್ರಿಣಯನ," ಸಮ್ಯಕ್ತ್ವ ಚೂಡಾಮಣಿ, " ಜಿನದೇವರಥಯಾತ್ರಾಪ್ರಭಾವಕ" ಎಂಬ ಬಿರುದುಗಳಿದ್ದುವು. ಇವನೇ ಕವಿಸಾಳ್ವನ ಪೋಷಕನು. ಈತನಲ್ಲಿ ಸಾಳ್ವನು ಪಟ್ಟದ ಕವಿಯಾಗಿದ್ದನು. ಸಾಳ್ವಮಲ್ಲನ ಸಹೋದರಿಯಾದ **ಮಲಿದೇವಿ**ಗೂ, ಮಕ್ಕಣ್ಣಕಾದಂಬನೆಂಬ ಬಿರುದುಳ್ಳ **ಶಾಂತದಂಡಾಧೀಶ**ನಿಗೂ ಹುಟ್ಟಿದ **ಸಾಳ್ವದೇವನು** ಬಳಿಕ ಪಟ್ಟಕ್ಕೆ ಬಂದನು. **ಸಾಳ್ವಮಲ್ಲ, ಸಾಳ್ವದೇವ** ಇವರಿಬ್ಬರ **ಇಷ್ಟಾ**ನುಸಾರವಾಗಿ ಕವಿಯು ಭಾರತವನ್ನು ಭಾಮಿನೀಷಟ್ಪದಿಯಲ್ಲಿ ಬರೆದನು. ಸುಮಾರು 1560 ರಲ್ಲಿ ಹುಟ್ಟಿದ ನಗರದ **55** ನೆಯ ಶಾಸನದಲ್ಲಿ ಮೇಲೆ ಹೇಳಿದ ದೊರೆಗಳ ವಿಷಯವು ಹೇಳಿದೆ 1916 ನೇ ಇಸವಿ ಮೈಸೂರುಶಾಸನದ ಇಲಾಖೆಯ ವರದಿಯ 69 ನೆಯ ಪುಟದಲ್ಲಿ, ಕ್ರಿ. ಶ. 1522 ರಲ್ಲಿ ಇಪ್ಪ ಒಬ್ಬತೌಳವ ದೇಶದ **ದೇವರಾಯ**ನ ಹೆಸರು ಹೇಳಿದೆ ಈ ಅಂಶಗಳಿಂದ ಕವಿಯ ಜನ್ಮಸ್ಥಳವಾವುದೆಂದು ಗೊತ್ತಾಗದಿದ್ದರೂ, ತೌಳವ, ಹೈವ, ಕೊಂಕಣದೇಶಕ್ಕೆ ರಾಜಧಾನಿಯಾಗಿದ್ದ **ನಗಿರನ**ಗರದ ರಾಜನ ಆಶ್ರಯದಲ್ಲಿದ್ದನೆಂಬುದರಿಂದ ಇವನ ವಾಸಸ್ಥಳವು **ನಗಿರ**ನಗರವೆಂಬುದು ಗೊತ್ತಾಗುವುದು."

ಈ ಮೇಲೆಹೇಳಿದಂತೆ ಕವಿಚರಿತ್ರಕಾರರು ಕ್ರಿ. ಶ. 1560 ರಲ್ಲಿ ಹುಟ್ಟಿತೆಂದು ಊಹಿಸಬಹುದಾದ ನಗರದ **55** ನೆಯ ಶಾಸನದಿಂದ ತಿಳಿದುಬರುವ ಈಕವಿಯ ಆಶ್ರಯದಾತರಾದ **ಸಾಳ್ವ**ಮಲ್ಲ ಮತ್ತು ಇವನ ಸೋದರಳಿಯ (ಯುವರಾಜ) ಸಾಳ್ವದೇವ, ಇವರ ಕಾಲದಿಂದ ಈ ಕವಿಯ (ಸಾಳ್ವನ) ಕಾಲವನ್ನು ಊಹಿಸಿ, ಸುಮಾರು ಕ್ರಿ. ಶ. **1550** ಎಂದು ಹೇಳಿರುವರು.

ಮದ್ರಾಸು ಸರಕಾರದ ಪ್ರಾಚ್ಯಕೋಶಾಲಯದಲ್ಲಿ ಸಂಚಿತವಾಗಿರುವ ಸ್ಥಳೀಯ ಪೂರ್ವಕಥೆಗಳನ್ನೂ (Local Records and Traditions) ಮತ್ತು ದಕ್ಷಿಣ ಕನ್ನಡಜಿಲ್ಲೆಯ ಮೂಡಬಿದರೆಯ ಹೊಸಬಸದಿಯ ಕೆಲವು ಶಾಸನಗಳನ್ನೂ ವಿಚಾರಮಾಡುವಲ್ಲಿ, ಈ ಕವಿಯ ಆಶ್ರಯದಾತರ ಕಾಲ, ಮತ ಮೊದಲಾದ ಕೆಲವು ಅಂಶಗಳು ತಿಳಿಯಬರುವುವು, ಈ ಕವಿಯ ಕಾಲ, ಮತ, ದೇಶವೊದ ಲಾದುವುಗಳನ್ನು ನಿರ್ಣಯಿಸಲು ಇವು ತಕ್ಕಮಟ್ಟಿಗೆ ಸಹಾಯಕಗಳಾಗಿರುವುವು.

ಮೇಲೆಹೇಳಿದ ಶಾಸನಗಳಲ್ಲಿ I. ಯದು. (1) ವಿಜಯನಗರದ ಪ್ರೌಢದೇವ ರಾಯನ ಕಾಲದಲ್ಲಿ ಹುಟ್ಟಿದುದು. ಇದರ ಕಾಲ ಶಕವರ್ಷ 1373. ಚಾರುಕೀರ್ತಿ ಪಂಡಿತಾಚಾರ್ಯರಿಗಾಗಿ ಚೂಡಾಮಣಿಯೆಂಬ ಚೈತ್ಯಾಲಯದ ಮುಖಮಂಟಪದ ನಿರ್ಮಾಣವನ್ನು ತಿಳಿಸುವುದು. ಈ ನಗಿರರಾಜ್ಯದ ಅರಸರು ವಿಜಯನಗರದ ಅರಸರ ಮಹಾಮಂಡಲಿಕರಾಗಿ ಗೇರುಸೊಪ್ಪೆಯಲ್ಲಿ ಆಳುತ್ತಿದ್ದು ಮೂಡಬಿದರೆಯ ಚೈತ್ಯಾ ಲಯದ ಜೀರ್ಣೋದ್ಧಾರವೊದಲಾದ ಅಭಿವೃದ್ಧಿಕಾರ್ಯಗಳಲ್ಲಿ ಬದ್ಧಾದರರಾ ಗಿದ್ದರು. ಎಂಬುದನ್ನು ಮಾತ್ರ ತಿಳಿಸುತ್ತದೆ.

II. ಯದು ನಗಿರರಾಜ್ಯದ ಭೈರವಕ್ಷ್ಮಾಪನ ಹೆಸರನ್ನೂ ; ಈತನ ವಂಶ, ಪ್ರತಾಪ, ಹೆಂಡತಿ, ಮಕ್ಕಳು, ನಗಿರರಾಜ್ಯದ ಅರಸರ ಆನುಕ್ರಮವಾದ ಹೆಸರು, ಇವರು ನಡಸಿದ ಧರ್ಮಕಾರ್ಯ ಮೊದಲಾದ ಅಂಶಗಳನ್ನೂ ತಿಳಿಸುತ್ತದೆ. ಇವನ ಗುರು ಚಾರುಕೀರ್ತಿಪಂಡಿತಾಚಾರ್ಯರೆಂಬ ಅಂಶವೂ ಇದರಿಂದ ತಿಳಿದು ಬರುವುದು.

III. ಯದು ಶಕವರ್ಷ 1384 ರಲ್ಲಿ ಈ ಭೈರವರಸನು ಮಹಾವ್ಯಾಧಿಗ್ರಸ್ತ ನಾಗಿದ್ದ ಕಾಲದಲ್ಲಿ ಮಾಡಿದ ಧರ್ಮಕಾರ್ಯವೊಂದನ್ನು ತಿಳಿಸುತ್ತದೆ.

IV. ಯದು. ಚಾರು ಕೀರ್ತಿಪಂಡಿತರ ನಿರೂಪದಿಂದ ವಿಜಯನಗರದ ವಿರೂ ಪಾಕ್ಷ ನರಪತಿಯ ಕೈಕೆಳಗೆ ಬಾರಕೂರ ವಿಟ್ಟರಸನು ರಾಜ್ಯಪರಿಪಾಲನೆ ಮಾಡುತ್ತಿ ದ್ದಾಗ ಕೆಲವುಮಂದಿ ಸೆಟ್ಟಿಗಳು ತ್ರಿಭುವನಚೂಡಾಮಣಿ ಬಸ್ತಿಗಾಗಿ ಮಾಡಿದ ಧರ್ಮವಿಷಯವನ್ನು ತಿಳಿಸುತ್ತದೆ. ಇದರ ಕಾಲ ಶಕವರ್ಷ 1394.

V. ಯದು. ಹಿರಿಯ ಬೈರವನ ತರುವಾಯ ಪಟ್ಟಕ್ಕೆ ಬಂದ ಅರಸರ ಅನು ಕ್ರಮವನ್ನೂ ಅವರ ಸಾಹಸಾದಿಗಳನ್ನೂ ವಿವರವಾಗಿ ತಿಳಿಸುತ್ತದೆ

---

(1) Article by M. R. Ry. P. Mangesha Rau. B. A., L. T., contributed to the "Panchakajjaya."

**ಇನ್ನುಳಿದ ಮೂರುಶಾಸನಗಳಲ್ಲಿ ಶಕವರ್ಷ** 1449, 1451, 1455 ರಲ್ಲಿ **ಗುರು**ರಾಯರು **ಸಂಗೀತ** ಪುರವನ್ನಾಳುತ್ತಿರುವಲ್ಲಿ **ಮಾಡಿದ** ಧರ್ಮಕಾರ್ಯಗಳು ವಿವೃತವಾಗಿವೆ. **ಮೇ**ಲಿನ ಈ ಶಾಸನಗಳಿಂದ "**ಗೇರುಸೊಪ್ಪೆ**" ಎಂಬುದು **ಭಲ್ಲಾತಕೀಪುರ, ಸಂಗೀತಪುರ**ಗಳೆಂಬ ನಾಮಾಂತರಗಳಿಂದ **ನಗಿರ**ರಾಜ್ಯದ ರಾಜಧಾನಿಯಾಗಿತ್ತೆಂದೂ, ಇಲ್ಲಿಯ ಅರಸರು ವಿಜಯನಗರದ ಅರಸರ ಮಾಂಡಳಿಕರಾಗಿ ಆಳುತ್ತಿದ್ದರೆಂದೂ ಗೊತ್ತಾಗುವುದು. ಈಗೇರುಸೊಪ್ಪೆಯ ಅರಸರ ವಂಶಾವಳಿಯನ್ನು ಈಕೆಳಗೆ ಕೊಟ್ಟಿರುವ ವಂಶವೃಕ್ಷದಿಂದ ತಿಳಿದುಕೊಳ್ಳಬಹುದು ವಿಜಯನಗರದ ಅರಸರ ಆಳಿಕೆಯಲ್ಲಿ ಅವರ ಮಾಂಡಳಿಕರಾಗಿದ್ದ ದಕ್ಷಿಣಕನ್ನಡಜಿಲ್ಲೆಯ ಹಲವು ನಾಡುಗಳ ಅಧಿಕಾರಿಗಳಲ್ಲಿ ಒಬ್ಬನಾದ ಸೋಮವಂಶದ ಕಾಶ್ಯಪಗೋತ್ರದವನಾದ **ಸಾಳ್ವನಾರಣಾಂಕನು ನಗಿರ**ರಾಜ್ಯದ ರಾಜಧಾನಿಯಾದ **ಗೇರುಸೊಪ್ಪೆ**ಯಲ್ಲಿ ರಾಜ್ಯಭಾರಮಾಡುತ್ತಿದ್ದನು. ಇವನ ವಂಶದಲ್ಲಿ ಹಲವು ಅರಸರು ಆಳಿಬಾಳಿದ ಬಳಿಕ **ಹೊನ್ನ**ನೃಪನು ಅರಸನಾದನು. ಇವನ ತರುವಾಯ ಅನುಕ್ರಮವಾಗಿ **ಕಾಮ, ಮಂಗರಸ, ಹೈವ, ಸಂಗಮ, ಕೇಶವ**, ಇವರು ರಾಜ್ಯವಾಳಿದರು. ದಕ್ಷಿಣ ಕನ್ನಡದಲ್ಲಿ ಪ್ರಚಾರವಾಗಿರುವ ಅಳಿಯಸಂತಾನದ ಕಟ್ಟಳೆಯಂತೆ ಮೇಲೆ ಹೇಳಿದ ಅರಸರೆಲ್ಲರೂ ಅಳಿಯಂದಿರಲ್ಲದೆ ಮಕ್ಕಳಲ್ಲ. ಮೇಲೆ ಹೇಳಿದ ಕೇಶವನಿಗೆ **ಸಂಗಮ**ನೆಂಬವನು ಅಳಿಯನಾದನು. ಈ ಸಂಗಮನ ತಂಗಿ ಶಂಕರ ದೇವಿ, ಅಕ್ಕ ಲಕ್ಷ್ಮೀದೇವಿ, ಮಗಳು ಮಾಣಿಕದೇವಿ. **ಲಕ್ಷ್ಮೀದೇವಿ**ಯು ಚಂದ್ರಗುತ್ತಿಯ ಕೊಪಣದ ತಿಳುವಳ್ಳಿಯ ಅರಸುವಂಶಕ್ಕೆ ಸೇರಿದ **ಕಾಯಪ್ಪ**ನನ್ನೂ, ಶಂಕರದೇವಿಯು **ಬಯ್ಯ**ನೃಪನನ್ನೂ ಮದುವೆಯಾದರು, ಈ ಲಕ್ಷ್ಮೀದೇವಿಯ ಮಗನೇ ಹಿರಿಯ **ಭೈರವ**ನೆಂಬವನು. ಇವನಿಗೆ ಚಿಕ್ಕಭೈರವ, ತಿಪ್ಪ, ಅಂಬಿರಾಯರೆಂಬ ತಮ್ಮಂದಿರೂ ಕೇಶವದೇವಿ ಮತ್ತು ಸಿರಿಯರಸಿ ಎಂಬ ತಂಗಿಯರೂ ಇದ್ದರು ಈ ಹಿರಿಯ ಭೈರವನು ಮಹಾಮಂಡಳಿಕನೆನಿಸಿ ತುಳುವ, ಹೈವ, ಕೊಂಕಣರಾಜ್ಯಗಳಿಗೆ ಅಧಿಕಾರಿಯಾದನು. ಇವನು ತನ್ನ ಸೋದರ ಮಾವನಾದ ಸಂಗನೃಪನ ಮಗಳಾದ **ಮಾಣಿಕದೇವಿ**ಯನ್ನೂ ತನ್ನ ಸೋದರತ್ತೆ ಬೊಮ್ಮರಸಿಯ ಮಗಳು **ನಾಗಲದೇವಿ**ಯನ್ನೂ ಮದುವೆಯಾದನು. ನಾಗಲದೇವಿಯಲ್ಲಿ ಸಂಗಮರಾಯನೂ, ಮಾಣಿಕದೇವಿಯಲ್ಲಿ ಗುರುರಾಯ, ಲಕ್ಷ್ಮೀದೇವಿ ಮತ್ತು ಪಂಡಿತದೇವಿ ಎಂಬ ಮೂವರು ಮಕ್ಕಳೂ ಜನಿಸಿದರು. ಈ ಭೈರವನ ಜನನ, ಪಟ್ಟಾಭಿಷೇಕ, ಅವಸಾನ ಮೊದಲಾದ ಯಾವುದೊಂದು ಅಂಶವೂ ನಿರ್ಧರವಾಗಿ ತಿಳಿದು ಬರುವುದಿಲ್ಲ. ಆದರೆ ಈತನು ಶಕ 1384 ರಲ್ಲಿ ಪ್ರಬಲವ್ಯಾಧಿಗ್ರಸ್ತನಾಗಿದ್ದನೆಂಬುದು ಮಾತ್ರ ಶಾಸನವೊಂದರಿಂದ

ಗೊತ್ತಾಗುತ್ತದೆ. ಮತ್ತು ಈ ಹಿರಿಯಭೈರವನ ತರುವಾಯ ಇಮ್ಮಡಿ ಭೈರವನೂ ಅಂಬಿರಾಯನೂ (ತಿಪ್ಪನಸಮುದ್ರಿಯೇ ಇಲ್ಲಿ) ರಾಜ್ಯವಾಳಿದ ಮೇಲೆ, ಹಿರಿಯಭೈರವನ ಚಿಕ್ಕಮ್ಮನಾದ ಶಂಕರದೇವಿಗೂ ಬಯ್ಯನೃಪನಿಗೂ ಪುತ್ರನಾದ ಜಿನದಾಸ **ಸಾಳ್ವ ಮಲ್ಲನು** ಅರಸನಾದನು. ಈತನಿಗೆ ಕಠಾರಿಸಾಳ್ವ, ಭಾವಜ್ಞ ಚಕ್ರೇಶ್ವರ, ತ್ರಿಣ ಯನ ಪಟಭಲ್ಲ" ಎಂಬ ಬಿರುದುಗಳಿದ್ದುವು. ಇವನ ತಂಗಿ ಮಲ್ಲಿದೇವಿಗೂ, **ಶಾಂತಿ** ದಂಡಾಧೀಶನಿಗೂ ಹುಟ್ಟಿದ ಸಾಳ್ವದೇವನು ಯುವರಾಜನಾಗಿದ್ದನು. ಎಂಬ ಅಂಶವು ತಿಳಿದುಬರುವುದು. ಇವುಗಳಲ್ಲಿ ಹಿರಿಯ ಭೈರವನ ಮಗ ಗುರುರಾಯನ ವಿಷಯ ವೇನೂ ಹೇಳಿರುವುದಿಲ್ಲ. ಆದರೆ ಮಿಕ್ಕ ಮೂರುಶಾಸನಗಳು ಮಾತ್ರ ಗುರುರಾಯನು 1455 ತನಕ **ಸಂಗೀತ**ಪುರದಲ್ಲಿ ಆಳುತ್ತಿದ್ದನೆಂದು ತಿಳಿದುಬರುವುದು. ಇದರಿಂದ ಈ ಸಾಳ್ವಮಲ್ಲನ ತರುವಾಯ ಸಾಳ್ವದೇವನು ಪಟ್ಟಕ್ಕೆ ಬರುವುದಕ್ಕೆ ಮೊದಲು ಗುರುರಾಯನು ಅರಸಾಗಿದ್ದಿರಬಹುದು.

(Local Records and Traditions) 31 ನೇ ಪುಸ್ತಕದಲ್ಲಿ ಅಡಕವಾಗಿ ರುವ ಒಂದುಶಾಸನದಲ್ಲಿ ಶಕವರ್ಷ 1464 ರಿಂದ 1497 ರತನಕ, ತುಳುವ ಹೈವ ಕೊಂಕಣದೇಶಗಳ ಅರಸನಾದ ಸಾಳ್ವಕೃಷ್ಣದೇವರಾಯನು ಗೇರುಸೊಪ್ಪೆ ಯಲ್ಲಿ ಆಳುತ್ತಿರುವಾಗ ಶಕವರ್ಷ 1481 ರಲ್ಲಿ ಧಾರೇಶ್ವರದಲ್ಲಿ ದಾನಮಾಡಿದ ವಿಷ ಯವೂ, 2 ನೆಯ ಶಾಸನದಲ್ಲಿ **ಸಾಳ್ವದೇವ**ರಾಯನ ಪ್ರಧಾನಿ **ಹೈವಣ್ಣ**ನಾಯಕನು ಶಕ 1463 ರಲ್ಲಿ ಭಟ್ಕಳದ ಚಂದ್ರನಾಥಬಸ್ತಿಯನ್ನು ಕಟ್ಟಿಸಿ, ಅದಕ್ಕೆ ದತ್ತಿಬಿಟ್ಟ ನೆಂಬ ವಿಷಯವೂ, ಕವಿಚರಿತ್ರೆಯಲ್ಲಿ ಭಟ್ಟಾಕಳಂಕನ ಕಾಲವನ್ನು ನಿರ್ಣಯಿಸು ವಾಗ ಹೇಳಿರುವ "ವಿಜಯಕೀರ್ತಿಯು ತನ್ನಶಿಷ್ಯನಾದ ದೇವರಾಯಭೂಪಾಲ ನಿಗೆ ಪಶ್ಚಿಮಸಮುದ್ರ ನಿಕಟದೊಳ್ ಭಟ್ಕಳಪಟ್ಟಣಮಂ ನಿರ್ಮಿಸಿಕೊಟ್ಟಂ" ಎಂದು ಹೇಳಿರುವಮಾತೂ, ಸಾಳ್ವದೇವರಾಯನು ಶಕ 1465 ರಲ್ಲಿ ಸಂಗೀತಪುರ ದಲ್ಲಿ ಪ್ರಭುತ್ವಮಾಡುತ್ತಿದ್ದನೆಂಬುದಕ್ಕೆ ವಿಶೇಷಸಹಕಾರಿಯಾಗಿವೆ

"ಕವಿಚರಿತ್ರಕಾರರು ಸಾಳ್ವಭಾರತದಲ್ಲಿ ಉಕ್ತವಾಗಿರುವುದೆಂದು ಹೇಳುವ ಹಿರಿಯಭೈರವರಸನ (ನಗಿರರಾಜ್ಯದಗೇರುಸೊಪ್ಪೆಯ ಅರಸರ) ವಂಶವೃಕ್ಷವೇನೋ ಇದಕ್ಕೆ ಸರಿಹೋಗುತ್ತದೆ. ಆದರೆ ಅಂಬಿರಾಯನು ರಾಜ್ಯಭಾರವನ್ನು ಮಾಡಿದುದಾಗಿ ಅಲ್ಲಿ ಹೇಳಿಲ್ಲ. "ಜಿನದಾಸಸಾಳ್ವಮಲ್ಲ" ಎಂಬುದಕ್ಕೆ ಪ್ರತಿಯಾಗಿ "ವಸುದಾನ ಮೇರು" ಎಂಬದಾಗಿ ಹೇಳಿದೆ." ಎಂದು ಮ. ರಾ. ಪಂಜೆ. ಮಂಗೇಶ ರಾಯರು "**ಪಂಚಕಜ್ಜಾಯ**" ವೆಂಬಪುಸ್ತಕದಲ್ಲಿ ವಿವರಿಸಿರುವರು.

ಈಸಾಳ್ವಭಾರತದಲ್ಲಿ ಈ ಅರಸರ ಕಾಲವನ್ನು ಹೇಳಿಲ್ಲ. ಕವಿಚರಿತ್ರಕಾರರು 1560 ರಲ್ಲಿ ಹುಟ್ಟಿದುದೆಂದು ಊಹಿಸಿರುವ ಸಾಗರದ 55 ನೆಯ ಶಾಸನದ ಆಧಾರದಿಂದ ಆಶಾಸನದಲ್ಲಿ ವರ್ಣಿತರಾಗಿರುವ ಅರಸರೂ ಇಲ್ಲಿ ಹೇಳಿರುವ ಅರಸರೂ ಒಂದೇ ಆಗಿರುವಕಾರಣ ಸಾಳ್ವದೇವನು ಕ್ರಿ ಶ. 1560 ರವರೆಗೂ ರಾಜ್ಯಭಾರಮಾಡುತ್ತಿದ್ದನೆಂದು ನಿರ್ಣಯಿಸಿ ಅವನ ಆಶ್ರಯದಲ್ಲಿದ್ದ ಈಸಾಳ್ವಕವಿಯು ಕಾಲವನ್ನು ಸು 1550, ಎಂದು ನಿರ್ಧರಿಸಿರುವರು.

ಹಿರಿಯಭೈರವರಸನು ಕ್ರಿ. ಶ. 1462 ರಲ್ಲಿ ಪ್ರಬಲವ್ಯಾಧಿಗ್ರಸ್ತನಾಗಿದ್ದುದರಿಂದ ಪ್ರಾಯಿಕವಾಗಿ ಆತನು ಆಕಾಲದಲ್ಲಿಯೇ ಮರಣವನ್ನು ಹೊಂದಿರಬೇಕು. ಬಳಿಕ ಅವನಮಗ ಗುರುರಾಯನು ಕ್ರಿ. ಶ. 1527 ರಲ್ಲಿ ರಾಜ್ಯಭಾರಮಾಡುತ್ತಿದ್ದುದರಿಂದ ಈಮಧ್ಯಕಾಲದಲ್ಲಿಯೇ ಇಮ್ಮಡಿಭೈರವ ಅಂಬಿರಾಯ, ಸಾಳ್ವಮಲ್ಲ ಇವರ ಪ್ರಭುತ್ವವು ಜರುಗಿರಬೇಕು [ಆದರೆ ಯಾರುಯಾರು ಎಷ್ಟೆಷ್ಟುವರುಷವಾಳಿದರೆಂಬುದೆಂದು ವಿವರವಾಗಿ ತಿಳಿದುಬರುವುದಿಲ್ಲ] ಗುರುರಾಯನು 1545 ರವರೆಗೂ ಆಳುತ್ತಿದ್ದು, ಬಳಿಕ ಸಾಳ್ವಮಲ್ಲದೇವರಾಯನು ಕ್ರಿ. ಶ. 1560 ರ ವರೆಗೂ ಆಳುತ್ತಿದ್ದನೆಂದು ಹೇಳುವುದರಿಂದ ಮೇಲೆಹೇಳಿದ ಆಧಾರಗಳೆಲ್ಲವೂ ಪರಸ್ಪರವಾಗಿ ಹೊಂದಿಕೊಳ್ಳುವುದೆಂದು ಹೇಳಬಹುದು.

## ಶಾಸನಗಳನ್ನನುಸರಿಸಿರುವ ವಂಶವೃಕ್ಷಗಳು

1 ಸಾಗರದ 55 ನೆಯ ಶಾಸನವನ್ನನುಸರಿಸಿದ ಭೈರವರಸನ ವಂಶವೃಕ್ಷ. (ಸೋಮವಂಶ ಕಾಶ್ಯಪಗೋತ್ರದವರು)
(ಈಶಾಸನವು (5) ದೇವರಾಯನ ಕಾಲದಲ್ಲಿ ಬರೆದುದು.)




ವಿಶೇಷ :—ಮೂಡಬಿದರೆ ಶಾಸನದಲ್ಲಿ. (1) ಭೈರವಭೂಪನ ಚಿಕ್ಕಮ್ಮ ಶಂಕರದೇವಿಯ ಮಗ ಸಾಳ್ವಮಲ್ಲನೆಂದೂ ಅವನ ತಂಗಿಯ ಮಗ ಸಾಳ್ವದೇವನೆಂದೂ ಹೇಳಿದೆ. ಈಶಾಸನದಲ್ಲಿ ಭೈರವಭೂಪನ ತಂಗಿಯಮಗ (5) ದೇವರಾಯ (ಇವನೇ ಸಾಳ್ವಮಲ್ಲನಾಗಿ ಬಹುದು) ಅವನ ತಂಗಿಯ ಮಕ್ಕಳು ಸಾಳ್ವಮಲ್ಲ ಮತ್ತು ಭೈರವೇಂದ್ರ ಇರಿಬ್ಬರೂ ದೇವರಾಯನ ಕಾಲದಲ್ಲಿ ಯುವರಾಜರಾಗಿದ್ದ ರೆಂದು ಹೇಳಿದೆ—

## II ಮೂಡಬಿದರೆಯ ಶಾಸನಗಳನ್ನನುಸರಿಸಿದ ಗೇರುಸೊಪ್ಪೆಯ ಹಿರಿಯಭೈರವರಸನ ವಂಶವೃಕ್ಷ.

(೧ ಮತ್ತು ೫ ನೆಯ ಶಾಸನಗಳಲ್ಲಿರುವಂತೆ.)



## III ಸಾಳ್ವಭಾರತವನ್ನನುಸರಿಸಿದ ಹಿರಿಯಭೈರವರಸನ ವಂಶವೃಕ್ಷ.




ವಿಶೇಷ :—ಇಲ್ಲಿ ಹಿರಿಯಭೈರವರಸನ ಹೆಂಡತಿ ಲಕ್ಷ್ಮೀದೇವಿ, ಇವರಮಕ್ಕಳು, ಹಿರಿಯಭೈರವರಸನ ತಮ್ಮ ಅಂಬಿರಾಯ ರಾಜ್ಯವಾಳಿದುದು ಈ ವಿಷಯಗಳೊಂದೂ ಇಲ್ಲ.—

ಪರಿಶೀಲಿನೆಯಿಂದ ಮೈಸೂರು 1916 ನೇ ಇಸವಿಯ ವರದಿಯಂತೆ (69 ನೆಯ ಪುಟ) ಕ್ರಿ. ಶ. 1522 ರಲ್ಲಿದ್ದ ತಾಳವದೇಶದ ದೇವರಾಯರಸನೂ, ಈ ಶಾಸನದಲ್ಲಿ ಹೇಳಿರುವ ದೇವರಾಯನೂ (ಸಾಳ್ವಮಲ್ಲನ ಭಾಗಿನೇಯ) ಒಬ್ಬನೇ ಆಗಿರಬಹುದೆಂದೂ, ಈತನೇ ಕ್ರಿ. ಶ. 1560 ರ ವರೆಗೂ ಆಳುತ್ತಿರಬಹುದೆಂದೂ ಊಹಿಸಬಹುದು. ಅಲ್ಲದೆ ಮೂಡಗೆರೆಯ41 ನೆಯ ಶಾಸನದಲ್ಲಿ ಶ್ರೀ ವಿಜಯನಗರದ ಕೃಷ್ಣರಾಯನ ಕ್ರಿ. ಶ. (1509—1529) ಕಾಲದಲ್ಲಿ ಕಾವ್ಯಸಾರವೆಂಬ ಗ್ರಂಥವನ್ನು ಸಂಕಲಿಸಿದ ವಿದ್ಯಾನಂದನು, ಸಾಳ್ವ ಮಲ್ಲರಾಯ, ಗುರುರಾಯ, ಸಾಳ್ವದೇವರಾಯನ ಆಸ್ಥಾನಗಳಲ್ಲಿಯೂ, ಕಾರ್ಕಳದ ಭೈರವರಾಜನಲ್ಲಿಯೂ, ವಾದಿಗಳನ್ನು ಜಯಿಸಿದನೆಂದು ಹೇಳುವುದರಿಂದ ಸಾಳ್ವಮಲ್ಲರಾಯನೂ, ಗುರುರಾಯನೂ, ಸಾಳ್ವದೇವರಾಯನೂ, ಕಾರ್ಕಳದ ಭೈರವನೂ ಏಕಕಾಲದಲ್ಲಿ ಕ್ರಿ. ಶ. (1509—29) ರ ವರೆಗಿನ ಕಾಲದಲ್ಲಿ ಇರಬೇಕೆಂದು ಗೊತ್ತಾಗುವುದು. ಇವರೆಲ್ಲರೂ ಅನುಕ್ರಮವಾಗಿ ಆಳುತ್ತಿದ್ದಾಗ ಎಲ್ಲರ ಕಾಲದಲ್ಲಿಯೂ ಈ ಕವಿಯು ಇದ್ದನೆಂದು ಹೇಳುವುದು ಅಷ್ಟು ಉಚಿತವಲ್ಲ. ಅಲ್ಲದೆ, ಸಾಗರದ ಶಾಸನದಲ್ಲಿ ಸಾಳ್ವಮಲ್ಲನಸೋದರಳಿಯನಾದ ದೇವರಾಯನು ಕ್ಷೇಮಪುರಾಧೀಶನೆಂದು ಹೇಳಿದೆ. ಪ್ರಾಯಶಃ ಈ ಕ್ಷೇಮಪುರವು ಮಂಗಳೂರಾಗಿದ್ದರೂ ಇರಬಹುದು. ಆದುದರಿಂದ ನಗಿರರಾಜ್ಯಕ್ಕೆ ಸೇರಿದ ಮಂಗಳೂರಲ್ಲಿ ಸಾಳ್ವಮಲ್ಲಿ ಮತ್ತು ದೇವರಾಯರೂ (ಯುವರಾಜ), ಸಂಗೀತಪುರದಲ್ಲಿ ಗುರುರಾಯನೂ, ಕಾರ್ಕಳದಲ್ಲಿ ಭೈರವನೂ, ಆಳುತ್ತಿದ್ದರೆಂದು ಹೇಳುವುದರಿಂದ ಈ ಅಲ್ಪವಿರೋಧವೂ ಪರಿಹೃತವಾಗುವುದು. ಈ ವಿಚಾರದಿಂದ ಕವಿಸಾಳ್ವನ ಕಾಲವನ್ನು ಕವಿಚರಿತ್ರಕಾರರು ಸುಮಾರು ಕ್ರಿ. ಶ. 1550 ಎಂದು ಹೇಳಿರುವುದೇ ಸರಿಯೆಂದು ತೋರುತ್ತದೆ.

ಈ ಸಾಳ್ವಮಲ್ಲನಿಗೆ "ಕವಿಸರೋವರ ರಾಜಹಂಸ," ಎಂಬ ಬಿರುದು ಇದ್ದುದರಿಂದ ಈತನ ಆಸ್ಥಾನದಲ್ಲಿ ಹಲವರು ಕವಿಗಳು ಇದ್ದರೆಂದೂ, ಈತನು ಕರ್ಣಾಟಕಭಾಷೆಗೆ ವಿಶೇಷವಾಗಿ ಪ್ರೋತ್ಸಾಹಕನಾಗಿದ್ದ ನೆಂದೂ ಗೊತ್ತಾಗುವುದು. ಸಾಜಕವಿ. ಕರ್ಣಾಟಲಕ್ಷಣದೋಜ ಎಂಬೀಬಿರುದಗಳಿಂದ ಈತನು ಸ್ವತಃ ಕವಿಯಾಗಿದ್ದನಲ್ಲದೆ ಕನ್ನಡ ಲಕ್ಷಣಶಾಸ್ತ್ರಗಳಲ್ಲಿ ಪ್ರವೀಣನಾಗಿದ್ದನೆಂದೂ ತಿಳಿದುಬರುವುದು.

ಸಂಸ್ಕೃತ ನೈಷಧಕಾವ್ಯಕ್ಕೆ ವ್ಯಾಖ್ಯಾನವೊಂದನ್ನು ಬರೆದಿರುವ ಶ್ರೀಧರ ದೇವನೆಂಬುವನು ತಾನು ಸಾಳ್ವಮಲ್ಲನ ಆಸ್ಥಾನಕವಿಯೆಂದು ಆಗ್ರಂಥದ *ಪ್ರತಿ ಯೊಂದುಸರ್ಗದ ಅಂತ್ಯದ ಗದ್ಯದಲ್ಲಿ ಹೇಳಿಕೊಂಡಿರುವನು. ಅಲ್ಲದೆ ಪ್ರತಿಯೊಂದು ಸರ್ಗದ ಕೊನೆಯಲ್ಲೂ ಒಂದು ಪದ್ಯದಲ್ಲಿ ತನ್ನವಂಶ, ತಾಯ್ತಂದೆಗಳ ಹೆಸರು ಮೊದಲಾದುವನ್ನೂ ಮತ್ತೊಂದರಲ್ಲಿ ಶ್ರೀಹರ್ಷನ ಸೂಕ್ತಿಪ್ರಭಾವವನ್ನೂ. ಮೂರ ನೆಯದರಲ್ಲಿ ಸಾಳ್ವಮಲ್ಲನ ಪ್ರಶಸ್ತಿಯನ್ನೂ ಶ್ಲಾಘಿಸಿ ಮೂರುಮೂರು ಪದ್ಯಗ ಳನ್ನೂ ರಚಿಸಿರುವನು. ಆದುದರಿಂದ ಈ ಸಾಳ್ವಮಲ್ಲನು ಕನ್ನಡಭಾಷೆಯಂತೆಯೇ ಸಂಸ್ಕೃತಭಾಷಾಕವಿತೆಗೂ ವಿಶೇಷಪ್ರೋತ್ಸಾಹಕನಾಗಿದಂತೆ ತಿಳಿಯಬರುವುದು.

ಈಗ್ರಂಥದಲ್ಲಿ ಕವಿಯು ತನ್ನ ಯಾವುದೊಂದು ಬಿರುದನ್ನೂ ಹೇಳಿಕೊಂ ಡಿಲ್ಲ. ಈತನು ಈ ಗ್ರಂಥದಲ್ಲಿ "ಆನಾರ್ಯರೆಂದೆ" ಎಂಬ ಪದ್ಯದಲ್ಲಿ, ಅಮೃತಾನಂದಿ, ರುದ್ರಭಟ್ಟ, ವಿದ್ಯಾನಾಥ, ಹೇಮಚಂದ್ರ, ಈ ನಾಲ್ವರ ಮಾರ್ಗದಿಂದ "ಗ್ರಂಥ ಮಂ ವಿರಚಿಸಿದೆಂ". "ನಾಗವರ್ಮ, ಕವಿ ಕಾಮಾದಿಗಳ ಮಾರ್ಗದಿಂ ರಸಭಾವಾ ಭಾಸಂಗಳಂ ವಿದ್ವತ್ಸಭೆಗಮುಭಯಭಾಷೆಗವಿ ಷ್ಟಮಪ್ಪಂತು ಕನ್ನಡಿಸಿದೆಂ" ಎಂದು ಹೇಳಿ ಈ ಗ್ರಂಥವನ್ನು ತನ್ನ ಸ್ವಂತಬುದ್ಧಿಬಲದಿಂದ ಬರೆಯಲಿಲ್ಲ ಹಿಂದಣ ಆಲಂ ಕಾರಿಕರು (ಶಾಸ್ತ್ರಕಾರರು) ಹೇಳಿರುವುದನ್ನು ಕನ್ನಡಭಾಷೆಗೆ ಪರಿವರ್ತನವನ್ನು

---

* ವಾಚಕರ ಅನಗಾಹನೆಗಾಗಿ ಒಂದುಸರ್ಗದ ಕೊನೆಯ ಲ್ಲಿನ ಪದ್ಯಗದ್ಯಗಳನ್ನುಮಾತ್ರ ಇಲ್ಲಿ ಕೊಟ್ಟಿದೆ

ನೈಷಧವ್ಯಾಖ್ಯಾ, ಶ್ರೀಧರೀಯಂ.

ಏಷಾ ಸದ್ಗುಣಶೋಭನಾ ಸುಮನಸಾಮುತ್ಕೃತ್ಯರ್ಥನೀಯಾಕ್ರಿಯಾ ।
ಕಾನ್ತಾವೇದವಿವಾಯುಕ್ತಿಸಮುಚಾ ಮೃದ್ವೀ ಸುವರ್ಣೋಜ್ಜ್ವಲಾ ॥
ಸ್ವಪ್ರೇಯಸ್ಯಶಿರೋಧೃತಾ ವಿಜಯತೇ ಶ್ರೀಹರ್ಷಹರ್ಷೋರ್ಜಿತಾ ।
ಸೂಕ್ತಿಸ್ರಜ್ಞನು ಮಾನಿನೀವ ನಿತರಾಮುತ್ಕೃರ್ಷರಾಗಾನಸಾ ॥
ನಾಗೇಂದ್ರೈಸ್ಸಮಲಂಕೃತ ಸ್ತ್ರಿಣಯುನ ಶಾಸ್ತ್ರೇಣ ಶಸ್ಯಚ್ಛಿನಾ ।
ಧಾರೋರ್ವೈರಪ್ರರಾರಿಚಾಪ್ರಣಮತಾಂ ಭೀಮಸ್ಸತಾಂ ಶಂಕರಃ ॥
ಸರ್ವಜ್ಞಸ್ಸ್ವವಿಭೂತಿಭೂಷಣಪರೋ ರಾಜಾವತಂಸೋಜ್ಜ್ವಲ।
ಸ್ಸಾಕ್ಷಾದೀಶ್ವರಏವ ಸಕ್ಷಿತಿಪತಿಃ ಶ್ರೀಸಾಳ್ವಮಲ್ಲಸ್ಸ್ವಯಂ ॥

ಇತಿ ಶ್ರೀ ಗುಣಪತೀಶಚರಣ ಸರಸಿರುಹಹರ್ಷಪದಾಯಮಾನವಿವಿಧವಿದ್ಯಾನಿಧಾನ ಗ್ರಹಣತ ರತ್ನಾಕರ ಶ್ರೀಸಾಲ್ವಮಲ್ಲಮಹೀಮಹೇಶ್ವರಾಸ್ಥಾನಭೂಷಾಮಾಣಿಕಾಯಮಾನ ವಿದ್ಯಾಧರ ಪಂಡಿತೇಂದ್ರ ಕುಲತಿಲಕ ವಿದ್ಯಾಶ್ರೀಧರ ಪಂಡಿತೇನ್ದ್ರ ವಿರಚಿತಾಯಾಂ ನೈಷಧಚರಿತಟೀಕಾಯಾಂ ಅಕ್ಷರ ದೀಪಿಕಾಯಾಂ ನವಮಸ್ಸರ್ಗಃ ಸಮಾಪ್ತಃ.

ಮಾತ್ರ ಮಾಡುರುವೆನೆಂದು ಹೇಳಿಕೊಂಡಿರುವನು. ಅಲ್ಲದೆ, ವಿರುದ್ಧರಸವನ್ನು ಹೇಳುವ ಸಂದರ್ಭದಲ್ಲಿ, ಉದಯಾದಿತ್ಯ, ಗಣೇಶ್ವರಾಗ್ನಿ ಎಂಬಿಬ್ಬರ ಮತವನ್ನೂ ಹೇಳಿರುವನು. ಈ ಹಿಂದಣ ಶಾಸ್ತ್ರಕಾರರಲ್ಲಿ ಯಾರುಯಾರು ಯಾವ ಯಾವ ಗ್ರಂಥಗಳನ್ನು ಬರೆದಿರುವರು, ಅವರವರ ಕಾಲ ಮೊದಲಾದುವುಗಳಾವುವು. ಎಂಬುದನ್ನು, ಇಲ್ಲಿ ಸಂಗ್ರಹವಾಗಿ ವಿವರಿಸುವುದು ಅಪ್ರಕೃತವಾಗಲಾರದು.

## (1) ಅಮೃತಾನಂದಿ.

ಸಾಳ್ವನು ಅಮೃತಾನಂದಿಯ ಹೆಸರನ್ನು ಆರಂಭದಲ್ಲಿ ಹೇಳಿರುವನು ಈಪದ್ಯದಲ್ಲಿಯೇ ಹೇಳಿರುವ ಮತ್ತಿನ ವಿದ್ಯಾನಾಥಹೇಮಚಂದ್ರರು ಸಂಸ್ಕೃತಾಲಂಕಾರಿಕರೆಂದು ಸ್ಪಷ್ಟವಾಗಿರುವ ಅಂಶವಾದುದರಿಂದ, ಈತನೂ ಸಂಸ್ಕೃತ ಗ್ರಂಥಕರ್ತನೇ ಆಗಿರಬೇಕು. ಇವನು ಯಾವ ಗ್ರಂಥವನ್ನು ಬರೆದಿರುವನೋ ಅದು ಪ್ರಕೃತದಲ್ಲಿ ಮುದ್ರಿತವಾಗಿರುವುದಿಲ್ಲ. ಮದರಾಸು ಪ್ರಾಚ್ಯಕೋಶಾಲಯದಲ್ಲಿರುವ ಹಸ್ತಲಿಖಿತಪ್ರತಿಗಳಲ್ಲಿ "ಅಮೃತಾನಂದಿಯ ಅಲಂಕಾರ ಸಂಗ್ರಹ" ವೆಂಬ ಸಂಸ್ಕೃತ ಗ್ರಂಥವೊಂದು ಇರುವುದು. ಇದರಲ್ಲಿ (1) ವರ್ಣಗಣ ವಿಚಾರ, (2) ಶಬ್ದಾರ್ಥ ನಿರ್ಣಯ, (3) ರಸನಿರ್ಣಯ, (4) ನೇತೃಭೇದ ವಿಚಾರ, (5) ಅಲಂಕಾರ ನಿರ್ಣಯ, (6) ದೋಷಗುಣಾಲಂಕಾರ ನಿರ್ಣಯ, (7) ಸಂಧ್ಯಂಗನಿರೂಪಣ, (8) ವೃತ್ತಿನಿರೂಪಣ, (9) ಕಾವ್ಯಾಲಂಕಾರ ನಿರೂಪಣ. ಎಂಬ ಒಂಭತ್ತು ಪರಿಚ್ಛೇದಗಳಿವೆ. ಇದೂ ಆತನಸ್ವತಂತ್ರ ಗ್ರಂಥವಲ್ಲ, ಹಿಂದಣ ಆಲಂಕಾರಿಕರ ಮತವನ್ನು ಸಂಗ್ರಹಿಸಿ ಹೇಳುವಂತೆ ಈತನ ಪ್ರೋತ್ಸಾಹಕನಾದ ಮನ್ನಭೂಪನು ಹೇಳಲು, ತಾನು ಆಗ್ರಂಥವನ್ನು ಬರೆದೆನೆಂದು ಆಕವಿಯೇ ಪೀಠಿಕೆಯಲ್ಲಿ ಹೇಳಿರುವನು. ಈ ಮನ್ನಭೂಪನು "ಸೋಮಸೂರ್ಯ ಕುಲೋತ್ತಂಸ" ನೆಂದೂ "ಸಮುದ್ರಬಿರುದಾಂಕಿತ" "ಯಮುಗಂಡರಗಂಡ" "ಕೊವರಂಕ ಭೀಮ" "ಸಮರಸಿರಂಕುಶ" "ನೂತ್ನ ಸಾಹಸಾಂಕ" ಮೊದಲಾದ ಬಿರುದುಗಳುಳ್ಳವನೆಂದೂ ಕವಿಯು ಗ್ರಂಥ ಪರಿಚ್ಛೇದಾಂತ್ಯಪದ್ಯಗಳಲ್ಲಿ ಹೇಳಿರುವನು. ಈಮನ್ನಭೂಪನ ತಂದೆಯು ಶಿವಪಾದಬ್ಜ ಷಟ್ಪದನಾದ ಭಕ್ತಿಭೂಮಿಪನು. ತಿರುಚಿನಾಪಳ್ಳಿಯಲ್ಲಿ ಜಂಬುಕೇಶ್ವರ ದೇವಸ್ಥಾನದಲ್ಲಿ ದೊರೆತ ಪ್ರತಾಪರುದ್ರದೇವನ ಶಾಸನವೊಂದರಿಂದ ಮನ್ನಗಂಡಗೋಪಾಲ ನೆಂಬೊಬ್ಬನು ಪ್ರತಾಪರುದ್ರನ ಸಾಮಂತ ನಾಗಿದ್ದನೆಂದು ತಿಳಿದು ಬರುವುದರಿಂದ ಈತನೇ ಅಮೃತಾನಂದಿಗೆ ಆಶ್ರಯದಾತನಾಗಿರಬೇಕೆಂದು ತೋರುವುದು.

ನೆಲ್ಲೂರಿನ ಶಾಸನವೊಂದರಲ್ಲಿ.—ಶಕವರ್ಷ 1221 (ಕ್ರಿ. ಶ. 1299).

ತಸ್ಯಾಗ್ರಜಃ ಸುತೋಮನ್ನಗಂಡ ಗೋಪಾಲಭೂಪತಿಃ ।
ಪ್ರತಾಪರುದ್ರಭೂಪಸ್ಯ ಪ್ರಸಾದಾರ್ಜಿತವೈಭವಃ ॥

ಎಂದು ಹೇಳುವುದರಿಂದ ಈ ಮನ್ನಭೂಪನ ಕಾಲವು ಕ್ರಿ. ಶ. 1299 ಎಂದು ಗೊತ್ತಾಗುವುದು. ಆದುದರಿಂದ ಈಕವಿಯ ಕಾಲವು ಕ್ರಿ. ಶ. 13 ನೆಯ ಶತಮಾನದ ಅಂತ್ಯಭಾಗವೆಂದೂ, ಪ್ರತಾಪರುದ್ರನ ಆಶ್ರಯದಲ್ಲಿ ಪ್ರತಾಪರುದ್ರೀಯವನ್ನು ಬರೆದ ವಿದ್ಯಾನಾಥನ ಸಮಕಾಲಿಕನೋ ಅಥವಾ ಅವನಿಗಿಂತಲೂ ಸಲ್ಪ ಈಚಿನವನೋ ಎಂದೂ ನಾವು ಊಹಿಸಬಹುದು. ಈತನು 13 ನೆಯ ಶತಮಾನದವನಾದರೂ ವಿಶೇಷವಾಗಿ (ಪ್ರಾಚೀನನಾದ, ವಾಮನಮತವನ್ನು (ಕ್ರಿ. ಶ. 9 ನೆಯ ಶತಮಾನ) ಅನುಸರಿಸಿ ತನ್ನ ಗ್ರಂಥವನ್ನು ಬರೆದಿರುವನು.

| ವಾಮನ. | ಅಮೃತಾನಂದಿ. |
| --- | --- |
| "ರೀತಿರಾತ್ಮಾ ಕಾವ್ಯಸ್ಯ" | ರೀತಿರಾತ್ಮಾಽತ್ರ ಕಾವ್ಯಸ್ಯ<br>ಕಥ್ಯತೇಸಾ ಚತುರ್ವಿಧಾ |

(2) **ರುದ್ರಭಟ್ಟ**—

ಮೇಲೆ ವಿವರಿಸಿದ ಪದ್ಯದಲ್ಲಿ ಸಾಳ್ವನು ಅಮೃತಾನಂದಿ, ವಿದ್ಯಾನಾಥ ಹೇಮಚಂದ್ರರೆಂಬ ಸಂಸ್ಕೃತ ಗ್ರಂಥಕರ್ತೃಗಳ ಜತೆಯಲ್ಲಿ ಈತನನ್ನೂ ಸೇರಿಸಿ ಹೇಳಿರುವುದರಿಂದ, ಈತನೂ ಸಂಸ್ಕೃತ ಗ್ರಂಥಕರ್ತೃವೇ ಆಗಿರಬೇಕು. ಸಂಸ್ಕೃತದಲ್ಲಿ. ಅಲಂಕಾರಸಂಗ್ರಹವನ್ನು ಬರೆದಿರುವ ರುದ್ರಭಟ್ಟನು (ರುದ್ರಟ) ಕ್ರಿ. ಶ. 9 ನೆಯ ಶತಮಾನದವನು ಮತ್ತು ಪ್ರಾಚೀನ ಮತದವನು. ಅಮೃತಾನಂದಿ, ವಿದ್ಯಾನಾಥ, ಹೇಮಚಂದ್ರ, ಇವರೆಲ್ಲರೂ ಪ್ರಾಯಃ ಕ್ರಿ. ಶ. 13 ನೆಯ ಶತಮಾನಧವರು ಮತ್ತು ನವೀನ ಮತಾವಲಂಬಿಗಳು. ಆದುದರಿಂದ ಈರುದ್ರಭಟ್ಟನೂ ನವೀನ ಮತಾವಲಂಬಿಯೇ ಆಗಿರಬೇಕು. ಇದರಿಂದ, ಸಾಳ್ವನು ಹೇಳುವ ರುದ್ರಭಟ್ಟನಿಗೂ, ಅಲಂಕಾರ ಸಂಗ್ರಹವನ್ನು ಬರೆದ ರುದ್ರಭಟ್ಟನಿಗೂ, ಆವಸಂಬಂಧವೂ ಇರಲಾರದು. ಅಲ್ಲದೆ, "ಶೃಂಗಾರತಿಲಕ" ಎಂಬ ಮತ್ತೊಂದು ಸಂಸ್ಕೃತಾಲಂಕಾರ ಗ್ರಂಥವನ್ನು ಬರೆದಿರುವವನಿಗೂ ರುದ್ರಭಟ್ಟನೆಂಬ ಹೆಸರಿದೆ. ಈತನ ಶೃಂಗಾರತಿಲಕವನ್ನು ಪ್ರತಾಪರುದ್ರೀಯದಲ್ಲಿ ವಿದ್ಯಾನಾಥನು ಹಲವುವೇಳೆ ಉದಾಹರಿಸಿರುವನು. ಆದುದರಿಂದ ಈತನು ವಿದ್ಯಾನಾಥನಿಗಿಂತ ಅತ್ಯಂತ ಪ್ರಾಚೀನನಾಗಿರಬೇಕು. ಕಾವ್ಯಾ

ಂಕಾರ ಕರ್ತೃವಾದ ರುದ್ರಟನೇ ಇದನ್ನು ಬರೆದನೆಂದು ಕೆಲವರೂ, ಮತ್ತೆ ಕೆಲ ರು ತದ್ಭಿನ್ನನೆಂದೂ ಹೇಳುವರು. ಆವಿವಾದವು ಹೇಗಾದರೂ ಇರಲಿ. ಈಶೃಂಗಾರ ಲಕದ ಅನುವಾದವು ಇಲ್ಲಿ ಕಂಡುಬರುವುದಿಲ್ಲವಾದುದರಿಂದ ಈ ಕವಿಯು ಹೇಳುವ ುದ್ರಭಟ್ಟನು ಶೃಂಗಾರತಿಲಕವನ್ನು ಬರೆದ ರುದ್ರಭಟ್ಟನಲ್ಲವೆಂದು ಖಂಡಿತವಾ ಯೂ ಹೇಳಬಹುದು.

ಮತ್ತೊಬ್ಬ ರುದ್ರಭಟ್ಟನು ಜಗನ್ನಾಥ ವಿಜಯವೆಂಬ ಕನ್ನಡ ಚಂಪೂಗ್ರಂಥ ವನ್ನು ಬರೆದಿರುವನು. ಕರ್ಣಾಟಕ ಕವಿಚರಿತ್ರೆಕಾರರು, "ಈತನ ಕಾಲವು ಸುಮಾರು ಕ್ರಿ. ಶ. 1180 ರಲ್ಲಿರಬಹುದೆಂದು ಊಹಿಸಿ, "ರಸಕಳಿಕೆ" ಯೆಂಬ ಗ್ರಂಥವನ್ನೂ ಈತನು ಬರೆದಂತೆ ಸಾಳ್ವನು (ಸು. 1550) ತನ್ನ ರಸರತ್ನಾಕರದಲ್ಲಿ ಹೇಳುತ್ತಾನೆ. ಈರಸಕಳಿಕೆ ನಮಗೆ ದೊರೆತಿಲ್ಲ" ವೆಂದು ಹೇಳುತ್ತಾರೆ, ಸಾಳ್ವನು, ಒಂದೆಡೆಯಲ್ಲಿ, ರುದ್ರಭಟ್ಟನ ರಸಕಳಿಕೆಯೊಳ್" ಎಂದು ಹೇಳಿರುವನು. ಈಮಾ ತನ್ನೇ ಆಧಾರವಾಗಿಟ್ಟುಕೊಂಡು ಜಗನ್ನಾಥ ವಿಜಯವನ್ನು ಮುದ್ರಿಸಿ, ಉಪೋ ದ್ಘಾತವನ್ನು ಬರೆದವರು, ರುದ್ರಭಟ್ಟನು "ರಸಕಳಿಕೆ" ಎಂಬ ಅಲಂಕಾರ ಗ್ರಂಥ ವನ್ನು ಬರೆದಂತೆ ಕಾಣುವುದೆಂದು ಹೇಳಿರುವರೇ ಹೊರತು, ಅದರ ಭಾಷೆಯಾವುದು. ಅದರ ಸ್ವರೂಪವೇನು, ಎಂಬುದನ್ನು ಮಾತ್ರ ಅಲ್ಲಿ ನಿರ್ಧರಿಸಲಿಲ್ಲ. ಸಾಳ್ವಕವಿಯು ಸಂಸ್ಕೃತ ಕವಿಗಳ ಗುಂಪಿನಲ್ಲಿ ಈ ರುದ್ರಭಟ್ಟನನ್ನು ಸೇರಿಸಿರುವುದರಿಂದ ಈ ರಸ ಕಳಿಕೆಯು ಸಂಸ್ಕೃತಗ್ರಂಥವಾಗಿಯೇ ಇರಬೇಕೆಂದು ನಾವು ಊಹಿಸಬಹುದು.

ಮದರಾಸು ಪ್ರಾಚ್ಯಕೋಶಾಲಯದಲ್ಲಿ ರಸಕಳಿಕೆ ಎಂಬ ಸಂಸ್ಕೃತ ಅಲಂ ಕಾರ ಗ್ರಂಥವೊಂದು ನಮಗೆ ದೊರಕಿತು. ಆದ್ಯಂತಗಳಲ್ಲೆಲ್ಲಿಯೂ ಆ ಗ್ರಂಥದ ಕರ್ತೃ ವಿನ ಹೆಸರು ಉಕ್ತವಾಗಿಲ್ಲ. ಈ ಸಾಳ್ವನು ಹೇಳಿರತಕ್ಕ ಒಂದೆರಡು ವಿಷಯಗಳುಮಾತ್ರ ಅದರದಲ್ಲಿ ದೊರಕುವುದು. ಇದರಿಂದ ಈ ರಸಕಳಿಕೆಯೆಂಬುದು ಸಾಳ್ವನು ಹೇಳು ವಂತೆ ರುದ್ರಭಟ್ಟನಿಂದ ರಚಿತವಾದದೆಂದು ನಾವು ನಂಬಬಹುದು. ಆದರೆ ಇದನ್ನು ಬರೆದ ರುದ್ರಭಟ್ಟನು ಯಾರು? ಆವ ಕಾಲದವನು? ಎಂದು ನಿರ್ಧರಿಸಲು ಯಾವ ಇತರ ಆಧಾರಗಳೂ ನಮಗೆ ದೊರೆತಿಲ್ಲ ಸಾಳ್ವನು ಹೇಳುವ ಸಂಸ್ಕೃತಾಲಂಕಾರಿಕರಲ್ಲರೂ ಪ್ರಾಯಃ ಕ್ರಿ. ಶ. 12 ಅಥವಾ 13 ನೇ ಶತಮಾನದವರು. ಕನ್ನಡದಲ್ಲಿ ಜಗನ್ನಾಥ ವಿಜಯವನ್ನು ಬರೆದ ರುದ್ರಭಟ್ಟನ ಕಾಲವೂ ಸುಮಾರು 12 ನೆಯ ಶತಮಾನದ ಅಂತ್ಯಭಾಗವಾಗಿರುವುದರಿಂದ, ಈ ರುದ್ರಭಟ್ಟನೇ ಈ ರಸಕಳಿಕೆಯನ್ನೂ ಬರೆ ದನೆಂದು ಹೇಳಲು ಔಚಿತ್ಯವುಂಟು.

## (3) ವಿದ್ಯಾನಾಥ.

ಈತನು ಓರಂಗಲ್ಲಿನ ಕಾಕತೀಯವಂಶದ ಪ್ರತಾಪರುದ್ರನ ಆಶ್ರಿತನೆಂದು ಪ್ರತಾಪರುದ್ರನ ಅಂಕಿತದಲ್ಲಿ ರಚಿಸಿರುವ "ಪ್ರತಾಪರುದ್ರಯಶೋಭೂಷಣ" ವೆಂಬ ಗ್ರಂಥದಿಂದ ತಿಳಿಯಬರುತ್ತದೆ. ಈ ಪ್ರತಾಪರುದ್ರನ ಕಾಲವು ಶಾಸನಗಳಿಂದ ಕ್ರಿ. ಶ. 1216 ರಿಂದ 1299 ಎಂದು ತಿಳಿದುಬರುವುದರಿಂದ, ಈತನ ಕಾಲವೂ ಕ್ರಿ. ಶ. 13 ನೆಯ ಶತಮಾನವೆಂದು ನಿರ್ಧರವಾಗುವುದು.

ಶಾಸನಗಳಿಂದ ನಿರ್ಧರವಾಗುವ ಪ್ರತಾಪರುದ್ರನ ವಂಶವೃಕ್ಷಂ.




(ಈ ಕೃಷ್ಣನು 1310 ಮಲ್ಲಿಕ್‌ಕಾಫರನನ್ನು ಸೋಲಿಸಿದನು ಬಳಿಕ 1424 ರಲ್ಲಿ ಈ ರಾಜ್ಯವು ಬಹಮನೀ ರಾಜ್ಯಕ್ಕೆ ಅಧೀನವಾಯಿತು)

## (4) ಹೇಮಚಂದ್ರ.

ಹೇಮಚಂದ್ರನ ಜನ್ಮ, ದೀಕ್ಷಾಗ್ರಹಣ, ಸ್ವರ್ಗಗಮನ ಪರ್ಯಂತವಾದ ಜೀವನಚರಿತ್ರೆಯು ವಿಷಯದಲ್ಲಿ ಕುಮಾರಪಾಲಪ್ರಬಂಧ, ಕುಮಾರಪಾಲಪ್ರತಿಬೋಧ, ಕುಮಾರವಿಹಾರಶತಕ, ಕುಮಾರಪಾಲಮಹಾಕಾವ್ಯ, ಮೋಹಪರಾಜಯ ನಾಟಕ, ಪ್ರಭಾವಕಚರಿತ್ರಾದಿ ಗ್ರಂಥಗಳಿಂದ ತಿಳಿದುಬರುವುದೇನೆಂದರೆ :— )

ಈ ವಿದ್ವತ್ಪುಂಗವನು ಸಂವತ್ 1145 ರಲ್ಲಿ ಹುಟ್ಟಿ, 1151 ರಲ್ಲಿ ಜಿನದೀಕ್ಷೆಯನ್ನು ಗ್ರಹಿಸಿ 1166 ರಲ್ಲಿ ಸೂರಿಪದವನ್ನು ಪಡೆದು. 1229 ರಲ್ಲಿ ಸ್ವರ್ಗಗಮನ ಮಾಡಿದನೆಂಧು ಗೊತ್ತಾಗುವುದು. ಈತನು ವ್ಯಾಕರಣ, ಛಂದಸ್ಸು, ಅಲಂಕಾರ ಮೊದಲಾದ ಹಲವುಶಾಸ್ತ್ರಗಳಲ್ಲಿಯೂ, ಜಿನಮತವಿಷಯದಲ್ಲಿಯೂ ಸುಮಾರು ಅರುವತ್ತಕ್ಕಿಂತಲೂ ಹೆಚ್ಚಾಗಿ ಗ್ರಂಥಗಳನ್ನು ಬರೆದಿರುವನು. ಈತನು ಕ್ರಿ. ಶ. 1089 ರಲ್ಲಿ ಹುಟ್ಟಿ 1173 ರಲ್ಲಿ ಸ್ವರ್ಗಸ್ಥನಾದನೆಂದು ತಿಳಿದು ಬರುವುದರಿಂದ ಈತನ ಕಾಲವು 12 ನೆಯ ಶತಮಾನದ ಅಂತ್ಯಭಾಗವೆಂದು ತಿಳಿದು ಬರುವುದು.

ಇನ್ನು ಸಾಳ್ವನು ಅನುವದಿಸಿರುವ ಕನ್ನಡ ಕವಿಗಳ ವಿಚಾರವನ್ನು ಸಂಗ್ರಹವಾಗಿ ಇಲ್ಲಿ ವಿವರಿಸುವೆವು ಸಾಳ್ವನು, ಮೇಲೆ ಹೇಳಿದ ನಾಲ್ವರು ಸಂಸ್ಕೃತಾಲಂಕಾರಿಕರನ್ನು ಗ್ರಂಥಾದಿಯಲ್ಲಿ ಸ್ತುತಿಸಿ "ನಾಗವರ್ಮ ಕವಿಕಾಮಾದಿಗಳ ಮತದಿಂ" ಎಂದು ಗ್ರಂಥಮಧ್ಯದಲ್ಲಿ ಉದಾಹರಿಸಿ ವಿರುದ್ಧ ರಸಗಳನ್ನು ಹೇಳುವಾಗ, ಇದು ನಾಗವರ್ಮನಮತಂ, ಇದು ಉದಯಾದಿತ್ಯನ ಮತಂ, ಮತ್ತು ಗಣೇಶ್ವರಾಜ್ಞಿಕೃತ (ಗಣೇಶ್ವರಾಗ್ನಿಯೆಂಬ ಪಾಠಾಂತರವೂ ಇದೆ) "ಸಾಹಿತ್ಯ ಸಂಜೀವನದಲ್ಲಿ......" ಎಂದು ಆರಂಭಿಸಿ "ವೀರಂ ಭೀಭತ್ಸಂ ರೌದ್ರಂ" ಇದು "ಸಾಹಿತ್ಯಸಂಜೀವನ" ಮತಂ, ಎಂದೂ ಹೇಳಿರುವನು.

ಇವರಲ್ಲಿ

(1) II ನೆಯ **ನಾಗವರ್ಮನು** ಕಾವ್ಯಾವಲೋಕನವೆಂಬ ಅಲಂಕಾರ ಗ್ರಂಥವನ್ನು ಬರೆದಿರುವನು. ಅದರಲ್ಲಿ ರಸ ವಿಷಯುವು ಒಂದು ಪ್ರಕರಣದಲ್ಲಿಯೇ ಅತಿ ಸಂಗ್ರಹವಾಗಿ ವಿವೃತವಾಗಿದೆ.

(2) **ಕವಿಕಾಮನು** ಶೃಂಗಾರ ರತ್ನಾಕರವನ್ನು ಬರೆದಿರುವನು. ಇದು ಕೇವಲ ರಸವಿಷಯವನ್ನೇ ಪ್ರತಿಪಾದಿಸುವ ಗ್ರಂಥವಾದರೂ, ಶೃಂಗಾರ ರಸವನ್ನು ವಿಸ್ತರವಾಗಿಯೂ, ಉಳಿದ ಎಂಟುರಸಗಳನ್ನು ಸಂಗ್ರಹವಾಗಿಯೂ ನಿರೂಪಿಸುವುದು. ಇದು ಪ್ರಾಯಃ ರುದ್ರಭಟ್ಟನ **ಶೃಂಗಾರತಿಲಕ**ದ ಛಾಯೆಯಾಗಿದೆ.

---

1 ಈಹೆಸರು ತಪ್ಪಾಗಿರುವಂತೆ ಕಾಣುವುದು. ಹಸ್ತಲಿಖಿತಪ್ರತಿಗಳಲ್ಲಿರುವಂತೆ ಮೇಲೆ ಬರೆದಿದೆ ಗಣೇಶ್ವರಗಜ್ಞಿ ಎಂದಿರಬಹುದು.

(3) **ಉದಯಾದಿತ್ಯ** ಈತನು ಉದಯಾದಿತ್ಯಾಲಂಕರವೆಂಬ ಚಿಕ್ಕದೊಂದು ಅಲಂಕಾರ ಗ್ರಂಥವನ್ನು ಬರೆದಿರುವನು. ಆದರೆ ಇದರಲ್ಲಿ ರಸವಿಷಯವೇ ಉಕ್ತ ವಾಗಿಲ್ಲ. ಉದಯಾದಿತ್ಯನಮತಂ ಎಂದು ಉದಹರಿಸಿರುವ ಕಂದಪದ್ಯವು ನಾಗ ವರ್ಮನ ಕಾವ್ಯಾವಲೋಕನದಲ್ಲಿರುವುದರಿಂದ ಹಸ್ತಲಿಖಿತಪ್ರತಿಗಳಲ್ಲಿ ಉದಯಾದಿ ತ್ಯನ ಮತಂ ಎಂಬುದು ಪ್ರಮಾದದಿಂದ ಬಿದ್ದಿರಬಹುದೆಂದು ಕಾಣುವುದು. ಅಥವಾ ಉದಯಾದಿತ್ಯನು ರಸವಿಷಯದಲ್ಲಿ ಗ್ರಂಥವೊಂದನ್ನು ಬರೆದಿರುವನೆಂದೂ ಅದನ್ನು ನಾಗವರ್ಮನು ಅನುವಾದ ಮಾಡಿರುವನೆಂದೂ ಹೇಳಬೇಕಾಗುವುದು ಪ್ರಬಲವಾದ ಆಧಾರವಿಲ್ಲದೆ ಹೀಗೆ ಹೇಳುವುದು ಅಷ್ಟು ಸಮಂಜಸವಲ್ಲ.

(4) **ಗಣೇಶ್ವರಾಜ್ಞಿ** (ಗ್ನಿ) ಈತನು ಸಾಹಿತ್ಯ ಸಂಜೀವನವೆಂಬ ಗ್ರಂಥವನ್ನು ಬರೆದಿರುವುದಾಗಿ ಈ ಗ್ರಂಥದಿಂದ ಮಾತ್ರ ತಿಳಿದು ಬರುವುದು. ಅದು ಅದ್ಯಾಪಿ ದೊರೆತಿಲ್ಲ. ಕವಿಚರಿತ್ರೆಯಲ್ಲಿಯೂ ಇವನ ಹೆಸರಾಗಲಿ ಈ ಗ್ರಂಥದ ಪ್ರಸಕ್ತಿ ಯಾಗಲಿ ಬಂದಿರುವುದಿಲ್ಲ. ಇಲ್ಲಿ ಆ ಗ್ರಂಥದ "ವೀರಂ ಭೀಭತ್ಸರೌದ್ರಂ..." ಎಂಬ ಎರಡು ಕನ್ನಡ ಪದ್ಯಗಳು ಉದಾಹೃತವಾಗಿರುವುದರಿಂದ ಇದೂ ಕನ್ನಡಭಾಷೆಯ ಅಲಂಕಾರ ಗ್ರಂಥವೊಂದೆಂದು ಸ್ಪಷ್ಟವಾಗುವುದು.

ಈಕವಿಯು ಹೇಳಿರುವ ಈ ಸಂಸ್ಕೃತಕರ್ಣಾಟಕ ಕವಿಗಳು 12 ಮತ್ತು 13 ನೆಯ ಶತಮಾನಕ್ಕೆ ಸೇರಿದವರಾದುದರಿಂದ ಈ ಕವಿಯ ಕಾಲವು ಅವರ ಕಾಲಕ್ಕಿಂತಲೂ ಈಚಿನದಾಗಿರಬೇಕೆಂದು ಹೇಳಬಹುದೇ ಹೊರತು ನಿರ್ಣಯವಾಗಿ ಹೇಳಲು ಸಾಧ್ಯವಿಲ್ಲ. 16 ನೆಯ ಶತಮಾನವೆಂದು ಈತನ ಕಾಲವನ್ನು ನಿರ್ಧರಿಸಿರುವುದು ಶಾಸನಾದಿ ಬಾಹ್ಯ ಸಾಧನಗಳಿಂದಲ್ಲದೆ ಈತನ ಗ್ರಂಥಗಳಿಂದಾಗಲಿ ಇವನು ಅನುವದಿಸಿರುವ ಗ್ರಂಥಗಳಿಂದಾಗಲಿ ಅಲ್ಲ. ಪ್ರಾಯಃ ಮುಂದಿನ ಕವಿಗಳಾರೂ ಇವನನ್ನು ಸ್ತುತಿಸಿರುವಂತೆ ಕಂಡು ಬರುವುದಿಲ್ಲ. ಇದರಿಂದ ಇವನ ಉತ್ತರಕಾಲದ ಅವಧಿಯನ್ನು ನಿಷ್ಕೃಷ್ಟವಾಗಿ ತಿಳಿಯಲು ಸಾಧ್ಯವಿಲ್ಲ.

## ಇವನಿಂದ ರಚಿತವಾದ ಗ್ರಂಥಗಳು.

### —(1) ರ ಸ ರ ತ್ನಾ ಕ ರ.—

ಈ ಗ್ರಂಥವು ಸೂತ್ರ ಮತ್ತು ವೃತ್ತಿಗಳ ರೂಪದಲ್ಲಿದೆ. ಅಲ್ಲಲ್ಲೇ ವಚನಗಳೂ ಕಾಣುತ್ತವೆ. ಉದಾಹರಣಗಳೆಲ್ಲವೂ ಪ್ರಾಚೀನ ಗ್ರಂಥಗಳಿಂದ ಉದ್ಧೃತ

ಗಾದುವು. ಇದರಲ್ಲಿ ನಾಲ್ಕು ಪ್ರಕರಣಗಳಿವೆ. ಮೊದಲನೆಯ ಪ್ರಕರಣದಲ್ಲಿ ಶೃಂಗಾರರಸವು ಸಪ್ರಪಂಚವಾಗಿ ವಿವೃತವಾಗಿದೆ. ಎರಡನೆಯ ಪ್ರಕರಣದಲ್ಲಿ ಉಳಿದ ಎಂಟುರಸಗಳೂ ನಿರೂಪಿತವಾಗಿವೆ. ಮೂರನೆಯ ಪ್ರಕರಣದಲ್ಲಿ ನಾಯಕ ನಾಯಿಕಾವಿಚಾರವು ಹೇಳಿದೆ. ನಾಲ್ಕನೆಯ ಪ್ರಕರಣದಲ್ಲಿ ವ್ಯಭಿಚಾರಿ ಭಾವಗಳೂ ಸಾತ್ವಿಕಭಾವಗಳೂ ವಿಭಾವಾನುಭಾವಗಳೊಡನೆ ಸೋದಾಹರಣವಾಗಿ ಉಪ ಪಾದಿತಗಳಾಗಿವೆ. ಮುಖ್ಯವಾಗಿ ಈತನು ಸಂಸ್ಕೃತಾಲಂಕಾರಿಕರಾದ ವಿದ್ಯಾನಾಥ, ಅಮೃತಾನಂದಿ, ರುದ್ರಭಟ್ಟ, ಇವರ ಮತವನ್ನು ಅಲ್ಲಲ್ಲಿ ಅನುವಾದಮಾಡಿದ್ದರೂ, ವಿಶೇಷವಾಗಿ ಹೇಮಚಂದ್ರನ ಮತವನ್ನೇ ಅನುಸರಿಸಿ ಹೋಗಿರುವನು. ಇವನು ಯಾರು ಯಾರಿಂದ ಎಷ್ಟೆಷ್ಟು ಭಾಗವನ್ನು ಆರಿಸಿ ಪರಿವರ್ತಿಸಿರುವನೆಂಬುದನ್ನು ಅನುಬಂಧದಲ್ಲಿ ವಿಶದವಾಗಿ ತಿಳಿಸುವೆವು.

ಈ ಕವಿಯು ತನ್ನ **ಲಕ್ಷಣ** ಪದ್ಯಗಳಲ್ಲಿ ನಾಗವರ್ಮನ ಲಕ್ಷಣಗಳನ್ನೇ ಒಂದೆರಡು ಕಡೆಯಲ್ಲಿ ಬರೆದಿದ್ದಾನೆ. ಕವಿಕಾಮನ ಶೃಂಗಾರರತ್ನಾಕರದಿಂದಲೂ, ನಾಗವರ್ಮನ ಕಾವ್ಯಾವಲೋಕನದಿಂದಲೂ, ಪಂಪ, ಪೊನ್ನ, ರನ್ನ, ಜನ್ನ, ರುದ್ರಭಟ್ಟ, ಅಗ್ಗಳ ಇವರುಗಳ ಗ್ರಂಥಗಳಿಂದಲೂ, ಹಲವು ಲಕ್ಷ್ಯಪದ್ಯಗಳನ್ನು ಆರಿಸಿ ತೆಗೆದುಕೊಂಡಿರುವನು.

ಪ್ರಕೃತದಲ್ಲಿ ಈಗ್ರಂಥವು, ನಾಲ್ಕು ಪೂರ್ಣವಾದ ಓಲೆಯ ಪ್ರತಿ ಒಂದು ಅಸಮಗ್ರವಾದ ಓಲೆಯ ಪ್ರತಿ ಒಂದು ಕಾಗದದ ಪ್ರತಿ ಇವುಗಳ ಸಹಾಯದಿಂದ ಪರಿಷ್ಕೃತವಾಗಿ ಮುದ್ರಿತವಾಗಿದೆ.

(**ಕ**) ಇದು ಮೈಸೂರು ಶಾಸನದ ಇಲಾಖೆಯ ಮ. ರಾ. ಪದ್ಮರಾಜ ಪಂಡಿತ ರಲ್ಲಿದ್ದ ಓಲೆಯ ಪ್ರತಿ. ಇದು ಬಹಳ ಹಳೆಯದಾಗಿ ನುಸಿಹಿಡಿದು (ಕ್ರಿಮಿಭಕ್ಷಿತ.) ಹೋಗಿದ್ದುದರಿಂದ ಅಕ್ಷರಗಳನ್ನು ಕಂಡು ಹಿಡಿವುದೇ ಬಹು ಪ್ರಯಾಸವಾಯಿತು. ಆದರೆ ಇದರಪಾಠವು ಬಹು ಮಟ್ಟಿಗೆ ಶುದ್ಧವಾಗಿದೆ. ಇದನ್ನೇ ನಾವು ವಿಶೇಷ ವಾಗಿ ಅನುಸರಿಸಿರುವೆವು.

(**ಖ**), (**ಗ**) ಇವೆರಡೂ ಮೈಸೂರು ಪ್ರಾಚ್ಯಕೋಶಾಲಯದ ಪ್ರತಿಗಳು ಇವೆರಡರಲ್ಲಿಯೂ ಅಶುದ್ಧತೆಯೂ ಗ್ರಂಥಪಾತಗಳೂ ಇವೆ. ಪಾಠಭೇದಗಳೂ ಹಲವೆಡೆಗಳಲ್ಲಿವೆ.

(ಘ) ಇದು ಮದರಾಸು ಪ್ರಾಚ್ಯ ಕೋಶಾಲಯದ ಪ್ರತಿ. ಗ್ರಂಥಾಕ್ಷರದಲ್ಲಿ ಬರೆದುದು. ಪಾಠಭೇದಗಳು ಕೆಲವು ಇವೆ. ಗ್ರಂಥಪಾತವೂ ವಿಶೇಷವಾಗಿದೆ.

(ಙ) ಇದು ಮೈಸೂರು ಟ್ರೇನಿಂಗ್ ಕಾಲೇಜಿನ ಲೈಬ್ರರಿಯಲ್ಲಿರುವ ಕಾಗದದ ಪ್ರತಿ ಇದು (ಖ) ಪುಸ್ತಕದ ಪುತ್ರಿಕೆಯಾಗಿರುವುದರಿಂದ ಹೆಚ್ಚು ಪ್ರಯೋಜನವಾಗಲಿಲ್ಲ.

(ಚ) ಇದು ಮದರಾಸು ಪ್ರಾಚ್ಯಕೋಶಾಲಯದ ಒಂದು ಸಂಸ್ಕೃತ ಗ್ರಂಥದ ನಡುವೆ ಎಲ್ಲಿಯೋ ಸೇರಿಕೊಂಡಿದ್ದ ಕೆಲವು ಓಲೆಗಳ ಅಸಮಗ್ರ ಪ್ರತಿ. ಇದರಲ್ಲಿ ಕೆಲವು ಪಾಠಭೇದಗಳಿವೆ.

ಪಾಠಭೇದಗಳೂ, ವಿಶೇಷ ಸಂಗತಿಗಳೂ ಗ್ರಂಥಾಂತ್ಯದಲ್ಲಿ ಪರಿಶಿಷ್ಟರೂಪವಾಗಿ ಸೂಚಿತವಾಗುವುವು.

(2) ಸಾಳ್ವಭಾರತ—

ಇದುಷಟ್ಪದಿಯಲ್ಲಿದೆ. ಪೂರ್ಣವಾದ ಗ್ರಂಥವು ಇನ್ನೂ ದೊರಕಲಿಲ್ಲ.

(3) ಶಾರದಾವಿಲಾಸ

(ಏತತ್ಕವಿಕೃತವಾದುದು) ಇದು ಅಪೂರ್ಣಗ್ರಂಥ. ವ್ಯಂಗ್ಯವಿಷಯವನ್ನು ತಿಳಿಸುವ ಎರಡನೆಯ ಪ್ರಕರಣವುಮಾತ್ರ ದೊರೆತಿದೆ. ಈಗ್ರಂಥದ ಆದಿಯಲ್ಲಿ "ಶಾರದವಿಲಾಸ ದ್ವಿತೀಯಪ್ರಕರಣಂ" ಎಂದೂ, ಅಂತ್ಯದಲ್ಲಿ "ಶಾರದಾವಿಲಾಸದಲ್ಲಿ ಧ್ವನಿವ್ಯಂಗ್ಯ ವಿವರಣಂ ದ್ವಿತೀಯಪರಿಚ್ಛೇದಂ." ಎಂದೂ ಇದೆ, ಆದುದರಿಂದ ಇದು ಕಾವ್ಯಲಕ್ಷಣವನ್ನು ತಿಳಿಸುವ ಒಂದು ದೊಡ್ಡ ಗ್ರಂಥವಾಗಿರಬಹುದು. ಕಾವ್ಯಲಕ್ಷಣಪ್ರಕರಣಗಳಲ್ಲಿಯೇ ರಸಪ್ರಕರಣವೂ ಒಂದಾಗಿರುವುದರಿಂದ, ಈಕವಿಯು ಈಗ್ರಂಥದಲ್ಲಿ ಸಂಗ್ರಹವಾಗಿ ತಿಳಿಸಿರುವ ರಸವಿಷಯವನ್ನೇ "ರಸರತ್ನಾಕರ" ವೆಂಬ ಹೆಸರಿನಿಂದ ಬೇರೆಯಾಗಿ ಬರೆದಿರಬಹುದೆಂದು ಊಹಿಸಲು ಅವಕಾಶವಿದೆ. ಈಗ್ರಂಥವು ಆನುಪೂರ್ವಿಯಲ್ಲಿ ವಿಶೇಷವಾಗಿ ಹೇಮಚಂದ್ರನ ಕಾವ್ಯಾನುಶಾಸನವನ್ನೇ ಅನುಸರಿಸಿ ಗ್ರಥಿತವಾಗಿರುವುದು. ಅಲ್ಲಿನ ಲಕ್ಷಣಗಳನ್ನಲ್ಲದೆ ಲಕ್ಷ್ಯಪದ್ಯಗಳನ್ನೂ ಕನ್ನಡಕ್ಕೆ ಪರಿವರ್ತಿಸಿರುವನು. ಈ ಗ್ರಂಥದಲ್ಲಿ ನಡುವೆ ಸ್ವಲ್ಪಗ್ರಂಥಪಾತವಿರುವುದು. ಬೇರೆ ಪೂರ್ಣವಾದ ಹಸ್ತಲಿಖಿತ ಪ್ರತಿ

ಗಳು ದೊರಕದಿರುವುದರಿಂದ ಇದನ್ನು ರಸರತ್ನಾಕರಗ್ರಂಥದ ಅನುಬಂಧಕ್ಕೆ ಸೇರಿಸಿ ಮುದ್ರಿಸಿದೆ.

(4) ವೈದ್ಯಸಾಂಗತ್ಯ.—ಇದು ಸಾಂಗತ್ಯವೆಂಬ ಛಂದಸ್ಸಿನಲ್ಲಿ ಬರೆದಿರುವ ವೈದ್ಯಗ್ರಂಥ.

UNIVERSITY INSTITUTE OF ORIENTAL STUDIES AND RESEARCH,
*Madras, 6th October 1930.*

A. VENKATA RAU, B.A., L.T.
AND
PANDIT H. SESHA AIYANGAR.

# ವಿಷಯಸೂಚಿಕೆ.

## ಶೃಂಗಾರ ಪ್ರಪಂಚಮೆಂಬ
### ಪ್ರಥಮ ಪ್ರಕರಣಂ.

ಇಂತು

**ಶೃಗಾರಪ್ರಪಂಚಮೆಂಬ ಪ್ರಥಮಂಪ್ರಕರಣಂ.**

# ನವರಸ ಪ್ರಪಂಚಮೆಂಬ.

## ದ್ವಿತೀಯ ಪ್ರಕರಣಂ.

ಇಂತು

**ನವರಸಪ್ರಪಂಚವೆಂಬ ದ್ವಿತೀಯಪ್ರಕರಣಂ.**

---

## ನಾಯಕನಾಯಿಕಾವಿವರಣಂ.

ತೃತೀಯ ಪ್ರಕರಣಂ.



---

* ಈ ಪದ್ಯವು (೧೨೫) ಸೂತ್ರ, ೬೭ (ಎಂದು ಮುದ್ರಿತವಾಗಿದೆ).

ಇಂತು

**ನಾಯಕನಾಯಿಕಾವಿವರಣಂ ತೃತೀಯಪ್ರಕರಣಂ.**

---

ಭಾವಾಧಿ ಕರಣಮೆಂಬ

ಚತುರ್ಥ ಪ್ರಕರಣಂ.



---

* ಸಂಖ್ಯೆ ತಪ್ಪಿದೆ.

(1) ಇದು ಭಾವಕ್ಕೆ ಸೇರಿದುದರಿಂದ ಔಗ್ರ್ಯ ಎಂದಿರಬೇಕು.

* ಸಂಖ್ಯೆ ತಪ್ಪಿದೆ. ೨೪೧ ಎಂಬ ಸಂಖ್ಯೆಯು ಕೈಬಿಟ್ಟುಹೋಗಿದೆ.

---

## ಪರಿಶಿಷ್ಟಂ—೧. (ಶಾರದಾ ವಿಲಾಸಂ)

---

೨೪—೨೫—೨೬—ಲಕ್ಷ್ಯಗಳು ಮೂಲಪ್ರತಿಯಲ್ಲಿ ತ್ರುಟಿತವಾಗಿವೆ. (೨) ಈ ಲಕ್ಷ್ಯ ಪದ್ಯಗಳು ಮೂಲ ಪ್ರತಿಯಲ್ಲಿ ತ್ರುಟಿತವಾಗಿವೆ.

---

**ಪರಿಶಿಷ್ಟಂ— ೨.**



**ಪರಿಶಿಷ್ಟ—೩.**

ಶ್ರೀ

ಸಾಳ್ವಕವಿವಿರಚಿತಂ.

# ರಸರತ್ನಾಕರಂ.

## ಶೃಂಗಾರಪ್ರಪಂಚವಿವರಣಂ.

### ಪ್ರಥಮ ಪ್ರಕರಣಂ.

---

(ಮಂಗಳಾಚರಣಂ)

ಮ|| ಪರಮಾರ್ಹಂತ್ಯವಧೂಟಿಗೊಲ್ದು ತನುವಂ ಗೆಲ್ದೈದೆ ಮೂದೇವರೊಂ |
ದಿರವಂ ನಕ್ಕನ್ನೃತಾದಿಗಂಜಿ ಕಡುಶೋಕಂಗೊಟ್ಟು ಮೋಹಾಳಿಗು ||
ದ್ಧುರದೋಷಾಳಿಗೆ ಪೇಸಿ ಕಾಯ್ದು ಭವಮಂ ಸುಟ್ಟೇಱಿ ಲೋಕಾಗ್ರಮಂ
ಸ್ಥಿರನಾಗಿರ್ದ ರಸೈಕನೀಗೆ ಮುದಮಂ ಶ್ರೀಮಜ್ಜಿನಾಧೀಶ್ವರಂ || ೧

ಕಂ|| ಸತತಗುಣನಿಲಯೆ ಲೋಕ |
ಸ್ತುತೆ ತರುಣಮೃಣಾಳವರ್ಣೆ ಸಕಲಕಲಾವಿ ||
ಶ್ರುತೆ ನಿರುಪಮೆ ಚಿನ್ಮಯಿ ಭಾ |
ರತಿ ಯೆನಸುಂ ನೆಲಸುಗೆಮ್ಮ ಮುಖಸರಸಿಜದೊಳ್ || ೨||

ಕವಿಕಾವ್ಯವಿಚಾರಂ.

ರಸರತ್ನಾಕರವಿಶೃಕೃತಿ |
ಪಸರಿಂದಿಡೆ ಸುಕವಿನಿಕರಬುಧಸಮಿತಿಗಳೀ ||
ಕ್ಷಿಸಿ ಕೆಯ್ಕೊಂಡೆಸೆವಿದಱಿಂದೊಳ್ |
ರಸರತ್ನಂಗಳನೆ ಪಡೆಯದಿರ್ಕುಮೆ ಚದುರರ್ || ೩||

ರಸಮಿಲ್ಲದ ಕಾವ್ಯಂ ನೀ |
ರಸಮದಱಿಂ ಕೃತಿಗೆ ರಸಮೆ ಸಾರಂ ನೆಗಟ್ದೀ ||
ರಸರತ್ನಾಕರದೊಳ್ ನೆಱೆ |
ರಸಭಾವಮನಱಿದ ಕವಿಯ ಕಬ್ಬಮೆ ಸಾರಂ || ೪||

1—A

ಮ|| ವಸುಧಾಚಕ್ರದೊಳೊಪ್ಪುತಿರ್ಪ ಜಸವಂತಂ ಶ್ರೀಜಿನಾಧೀಶಪಾ |
ದಸರೋಜಾತಮದಾಳಿ ಶಬ್ದಸದಲಂಕಾರಾದಿಶಾಸ್ತ್ರಜ್ಞರೊ |
ಲ್ದ ಸಭಾರಂಜನವಾಣಿ ರಾಜಬುಧಮಾನ್ಯಂ ಮಾರ್ಗಸಾರಂಗಳಿಂ |
ರಸರತ್ನಾಕರಮಂ ಸಮಂತು ಕವಿಸಾಳ್ವಂ ಪೇಳ್ದಿನೊಳ್ಪಿಂಬಿನಂ || ೫||

ಕಂ|| ಅವಗುಣವಿದಱಿೊಳಗೇನಾ |
ನುವುಳ್ಳೊಡಂ ನಿಮ್ಮಗುಣಮನುಱಿ ಮೆಱಿಯಲ್ ತಿ ||
ರ್ದುವುದು ಬಹುಶ್ರುತರೆನಿಸಿದ |
ಕವಿಗಳ್ ಬುಧರೊಲ್ದು ಗುಣಕೆ ಪುರುಡಿಪರೊಳರೇ || ೬||

ಕಂ|| ಕವಿಯೆಂಬ ಪೆಸರ್ಗೆ ಮಚ್ಚ‌ರಿ |
ಪವಿವೇಕಿಗಳಿರದಲೆಗಳೆಗೊಳ್ಳಬ್ಬಿಗರೀ ||
ವಿವಿಧರಸಾಮೃತಮಂ ಸಲೆ |
ಸವಿದಮುರ್ದಣಿಯಂತೆ ಸುಖಿಸುತಿರ್ಕನವರತಂ || ೭||

(1) ಆನಾರ್ಯರೆಂದೆ ತಿಳಿದವ್ಯ |
ತಾನಂದಿಯ ರುದ್ರಭಟ್ಟನಾ ತೆಱದಿಂ ವಿ ||
ದ್ಯಾನಾಥ ಹೇಮಚಂದ್ರರ |
ಭೂನುತಮಾರ್ಗಾದಿಯಂದಮಂ ವಿರಚಿಸಿದೆಂ || ೮||

ವ|| ಇಂತು ನಾಗವರ್ಮಕವಿಕಾವ್ಯಾದಿಗಳ ಮಾರ್ಗದಿಂ ರಸಭಾವಾಭಾಸಂಗಳ ನೆಲ್ಲಾವಿದ್ವತ್ಸಭೆಗಮುಭಯಭಾಷೆಗವಿಷ್ಟಮಪ್ಪಂತು ಕನ್ನಡಿಸಿದೆನದೆಂತೆನೆ||

ಕಂ|| ಮುಂನೊರೆದ ಕೃತಿಗಳಿರೆ ಬಱಿ |
ಕಿಂನೇವುದೊ ಕಬ್ಬಮೆನ್ನದಿರ್ ಕನ್ನೆಗೆ ಮು ||
ನ್ನಂ ನಗೆಗಣ್ ನೆಗೞ್ದಿರೆ ಬಱಿ |
ಯಂ ನೆಲೆ ಮೊಲೆ ಮೂಡಿ ಮಾಡವೇ ಮೋಹನಮಂ || ೯||

1. ಕೆಲವು ಹಸ್ತಲಿಖಿತ ಪ್ರತಿಗಳಲ್ಲಿ ಗ್ರಂಥವು ಈ ಪದ್ಯದಿಂದಲೇ ಆರಂಭವಾಗಿದೆ.

ವ|| ಎಂದಿರ್ಪುದಱಿಂದೆ ಚತುರರ್ಕಳ್ ಲೇಸಂ ಕೆಯ್ಕೊಳ್ಗೆ.
ಪ್ರಯೋಜನಮೇನೆಂದೊಡೆ || ೧೦||

ಕಂ|| ರಸಭಾವಾಲಂಕಾರ |
ಪ್ರಸರಮೆ ಪರಮೇಶನುರುಚರಿತ್ರಮುದಱಿನೊ ||
ಳ್ಪೆಸೆವಾ ಸಮ್ಯಕ್ತ್ವಮದಱ |
ಬಸಮಾಗದೆ ಪರಮಶಾಂತಮನ್ಮೃತಶ್ರೀಯುಂ || ೧೧||

ವ್ಯರ್ಥಮಿದಲ್ಲಿದು ಜಿನನ ಪ |
ದಾರ್ಥಮನೋಥರ್ಮಬೋಧಶಾಸ್ತ್ರಂ ಚಿಪ್ಪ ||
ದ್ಯಾರ್ಥಿಗೆ ಹೇಯೋಪಾದೇ |
ಯಾರ್ಥಜ್ಞಾನಾರ್ಥಮಪ್ಪುದೀ **ರಸಶಾಸ್ತ್ರಂ** || ೧೨||

(ಗ್ರಂಥಾರಂಭಂ)

ಸೂತ್ರಂ ೧.

ಭಾವಂ ವಿಭಾವಮೆಸೆವನು |
ಭಾವಂ ಸಂಚಾರಿಭಾವಮೆಂಬಿಂತಿವಱಿಂ ||
ದಾವಿಷ್ಕೃತಮಕ್ಕುಂ ರಸ |
ಮಾವುದುಮೆಂದಱಿಗೆ ಭರತಶಾಸ್ತ್ರಕ್ರಮದಿಂ ||

ವೃತ್ತಿ :—ನಾಗವರ್ಮಸಂತಪ್ಪುಗೆಯ್ವನದಱ ವಿವರಮೆಂತೆಂದೊಡೆ. ರಾಗಾದ್ಯಭಿನಯದೊಡಗೂಡಿದ ಸ್ಥಾಯಿವ್ಯಭಿಚಾರಿಲಕ್ಷಣಮಪ್ಪ ಚಿತ್ತವೃತ್ತಿಯೆಭಾವಮೆನಿಕ್ಕುಂ. ಆ ಚಿತ್ತವೃತ್ತಿಗಳ್ ಕಾವ್ಯನಾಟ್ಯಶಾಸ್ತ್ರಪ್ರಸಿದ್ಧಂಗಳಪ್ಪ ಆಲಂಬನೋದ್ದೀಪನಸ್ವಭಾವಂಗಳಾದ ಲಲನೋದ್ಯಾನಾದಿಕಂಗಳಿಂ ವಿಶಿಷ್ಟತ್ವದಿಂ ಸ್ಥಾಯಿಭಾವಂಗಳನುದ್ಬೋಧಿಪುದಱಿಂ ವಿಭಾವಮೆನಿಕ್ಕುಂ. ಮತ್ತಮಾಸ್ಥಾಯಿವ್ಯಭಿಚಾರಿಲಕ್ಷಣಭೂತಚಿತ್ತವೃತ್ತಿವಿಶೇಷಂಗಳ್ ಕಟಾಕ್ಷಭುಜವಿಕ್ಷೇಪಾದ್ಯನುಭವಂಗಳಿಂ ಸಾಮಾಜಿಕನನುಭವಿಸುವುದಱಿಂದನುಭಾವಂಗಳೆನಿಕ್ಕುಂ. ಮತ್ತಾಪಿಗಳಾಸ್ಥಾಯಿಗಳಂ ನಾನಾಪ್ರಕಾರದಿಂದಭಿ

ಮುಖಮಾಗಿ ಮಾಡುತ್ತೆ ಸಂಚರಿಪುದಱಿಂ ವ್ಯಭಿಚಾರಿಗಳೆನಿಕ್ಕುಂ. ಈ ಮೂಱುಂತೆಱದ ಭಾವಂಗಳ್ ಸ್ಥಾಯಿಗಳಂ ವ್ಯಕ್ತಂ ಮಾಳ್ಪುದಱಿಂ ಕಾರ್ಯಕಾರಣಸಹಕಾರಿಗಳಕ್ಕುಂ. ಇಂತೆಂಬ ಶಬ್ದಕ್ಕೆ ವಿಭಾವಾನುಭಾವ ವ್ಯಭಿಚಾರಿಭಾವಂಗಳೆಂಬ ವ್ಯಪದೇಶಂಗಳಾದುವು. ಇಂತಾದ ಸ್ಥಾಯಿ ಭಾವಂಗಳ್ ಇವೆನ್ನವು ಇವನ್ಯನವು ಇವೆನ್ನವಲ್ತು [ಇವನ್ಯನವಲ್ತು] ಎಂಬ ಸಂಬಂಧವಿಶೇಷಸ್ವೀಕಾರಪರಿಹಾರನಿಯಮದನವಸಾಯದಿಂ ಸಾಧಾರಣಂಗಳಾದುವು. (ಸಾಧಾರಣದಿಂ ಸಾಮಾಜಿಕರ್ಗೆ ಕಾವ್ಯನಾಟಕಾದಿಗಳಿಂ ವ್ಯಕ್ತ ಮಾದುವು.) ಅವರ್ಗೆ ಮುನ್ನೆ ವಾಸನಾರೂಪದಿನಿರುತವಿರ್ಪುದಱಿಂ ರತ್ಯಾದಿಗಳ್ ಸ್ಥಾಯಿಭಾವಂಗಳೆನಿಕ್ಕುಂ. ನಿಯತಮಾಗಿಯನುಭವಿಪರ ನೆಯ್ದಿರ್ದುದಱಿಂ, ಸಾಧಾರಣೋಪಾಯಬಲದಿಂ ಗೋಚರಿಸಿದುದಱಿಂದನುಭೂಯಾತ್ಮಕಂ ರಸಂ ತಾನಾದುದು. ಅದು ವಿಭಾವಾದಿ ಜೀವಿತಾವಧಿಯುಮಲೌಕಿಕಮು ಮಕ್ಕುಂ. ಚಮತ್ಕಾರಕಾರಿಯಾದುದಱಿಂ, ಬ್ರಹ್ಮಾಸ್ವಾದಸೋದರಂ, ನಿಮೀಲಿತನಯನಂಗಳುಳ್ಳ ಕವಿಸಹೃದಯರಿಂದೆ ರಸ್ಯಮಾನಮಾದುದು. ಅದು ದುಗ್ಧಾಸ್ವಾದನದಂತೆ ಸ್ವಸಂವೇದನಸಿದ್ಧಂ.

ಮತ್ತಮಾ ರಸಂಗಳೀವಿಭಾವಾದಿಗಳಿಂದಭಿವ್ಯಕ್ತಂಗಳಲ್ಲದೆ ವಿಭಾವಾದಿಗಳ ಕಾರ್ಯಮಲ್ತು :—ಅದೆಂತೆನೆ ಚಕ್ರಕುಲಾಲಾದಿಗಳ್ ಇಲ್ಲದೊಡಂ ಘಟವಿರ್ಪಂತೆ ವಿಭಾವಾದಿಗಳ್ ವಿನಾಶಮಾದೊಡೆ ರಸವಿರ್ಪುದಿಲ್ಲ. ಮತ್ತಮವು ಜ್ಞಾಪಕಂಗಳಕ್ಕುಮೆಂದೊಡಮದಲ್ತು ಘಟಾದಿಯಂತೆ ಸಿದ್ಧವಸ್ತುಗಳಲ್ಲದುದಱಿಂದೆ. ಆದೊಡೆ ಲೋಕದೊಳ್ ಕಾರಕಜ್ಞಾಪಕಂಗಳಿಂ ಬೇಱಪ್ಪುದೊಂದುಂ ಕಾಣಲ್ಪಟ್ಟುದಿಲ್ಲ ತಾನಲೌಕಿಕಸಿದ್ಧಿಯಾದುದೆಂದೊಡೆ ಅದು ಭೂಷಣಮಲ್ಲದೆ ದೂಷಣಮಲ್ತು.

ಮತ್ತಂ ವಿಭಾವಾನುಭಾವವ್ಯಭಿಚಾರಿಗಳಿಂ ರಸಮಭಿವ್ಯಕ್ತಮಾಗಬೇಕಲ್ಲದೊಂದೊಂದಱಿಂದಾಗ(ದಾ)ದೊಡದುಂ ವ್ಯಭಿಚಾರಮಪ್ಪುದು. ಎಂತೆಂದೊಡೆ. ಸಿಂಹಶಾರ್ದೂಲಾದಿ ಭಯಾನಕಕ್ಕೆ ವಿಭಾವಂ. ಅದಱಿಂದಮೆ ಭಯಾನಕಮಾದುದಿಲ್ಲ, ಅದುವೆ ವೀರರೌದ್ರಾದ್ಭುತಂಗಳ್ಗಮಾಗುತ್ತಿರ್ಪುದ

ಱಿಂ, ಮತ್ತಮಾಕರುಣಕ್ಕಶ್ರುಪಾತಾದಿಯನುಭಾವಂ, ಅಂತದೆ ಶೃಂಗಾರ ವೀರಭಯಾನಕಕ್ಕಮಪ್ಪುದು. ಕರುಣಕ್ಕೆ ಚಿಂತಾದಿಗಳ್ ವ್ಯಭಿಚಾರಿಗಳ್ ಅಂತವೆ ಶೃಂಗಾರವೀರಭಯಾನಕಕ್ಕಮಪ್ಪುವು. ಒಂದೊಂದೆಡೆಯೊಳೆತ್ತಾನುಮೋರೊಂದಱ ಸ್ವೀಕಾರಮುಂಟು.

ಉ|| ಈಕೆಯ ಲೋಚನಂ ಕುಸುಮಸಾಯಕವೀಕೆಯ ಪುರ್ಬು ಕರ್ವುವಿ |
ಲ್ಲೀಕೆಯ ಕುಂತಳಂ ಭ್ರಮರಸಂಕುಳವೀಕೆಯ ವಾಗ್ವಿಲಾಸಮೇ |
ಕೋಕಿಲನಾದವೀಕೆಯ ಮೊಗಂ ಶಶಿಯೀಜಗಮಂ ಗೆಲಲ್ಕೆ ಸಾ |
ಕೀಕೆಯ ರೂಪಮೆಂದು ಮಕರಧ್ವಜನೀಕೆಯನೆಯ್ದೆ ಪೊರ್ದುಗುಂ || ೧೩||
(ಇದು ವಿಭಾವಮೆ)

ಮ|| ಮನಮೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂ |
ಬಿನ ಕೋಳ್ಗಂ ತಳಿವಾಲಿನೀರ್ಗಮಲರ್ವಾಸಿಂಗಂ ಕುಳಿರ್ಕೋಳ್ಪಿ ನಂ |
ದನಕಂ ಚಂದನಕಂ ಪಸುರ್ಪೆಸೆವ ಬಾೞಿಲ್ಗೊಂಪಕ್ಕವೊಂದೊಂದೆ ತ |
ಣ್ಪಿಸಿಯಂ ಸೂಸುತುಮಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ|| ೧೪||
(ಇವನುಭಾವಂಗಳ್)

ಮ|ಸ್ರ||ಹೃದಯಾಧೀಶಂ ಕುರುಳ್ಗವ್ವಳಿಸೆ ನುಡಿಯೆ ಮೇಲ್ವಾಯೆ ಲಲ್ಲೈಸೆ ಮೆಲ್ಪಿಂ|
ಮೊದಲೊಳ್ ಸರ್ವಾಕ್ಷಿಪಾತಂ ಬೞಿಕದು ನಯನಾರ್ಧಾವಲೋಕಂ ಬೞಿಕ್ಕೊಂ |
ದುದಯಂ ನೇತ್ರತ್ರಿಭಾಗಂ ಬೞಿಕಿೞಿದುದಪಾಂಗೇಕ್ಷಣಂ ತಾಂ ಬೞಿಕ್ಕಾ |
ವುದುಮಿಲ್ಲಾಯ್ತಗ್ಗಳಂ ಕಾಮಧಿಸಿನಿಯಳ ಸುಮ್ಮಾನದಿಂ ಮಾನಮಲ್ತೇ||೧೫|

ಇಲ್ಲಿಗರ್ವವ್ರೀಡಾಕೋಪಹರ್ಷಸಂಮೋಹವ್ಯಭಿಚಾರಿಭಾವಂಗಳಿರ್ದುವು. ಇಂತೊಂದೊಂದಾದೊಡಂ ಆಕ್ಷೇಪದಿಂ ಮತ್ತೊಂದೊಂದನ್ನೈದುತಿಪ್ಪುದಱಿಂ ವ್ಯಭಿಚಾರಮಲ್ತು. ವ್ಯಭಿಚಾರಿಸಾತ್ವಿಕಭಾವಂಗಳ ವಿಚಾರಂ ಮುಂದೆ ಪೇೞ್ದಿರ್ದುದು. ಅಲ್ಲಿಯವಂ ತಿಳಿಗೆ. ಲಕ್ಷಣ ಗ್ರಂಥಂಗಳೆಲ್ಲಂ ಪಾಠಮಾಡಲ್ಲದೆ ಸಭಾರಂಜಕನಾಗನದಱಿಂದಿವನ ಸಂಕ್ಷೇಪಿಸಿ ಸೂತ್ರಂಗಳಂ ಮಾಡಿ ಪೇೞ್ವೆಂ. ಅವಂ ಮೊದಲಾದ ಸೂತ್ರೋದಾಹರಣಂ

ಗಳಂ ಪಾಠಮುಂ ಮಾಡಿ ಕೊಂಬುದು. (1) ಆದಿಶಬ್ದಂಗಳ್ ಬಂದುದಱಿಂ ನವರಸಗಳ್ಗೆ ವೃತ್ತಿಯಂ ಬಱಿದೆಂ. ಆ ವೃತ್ತಿಗಳುಮಂ ವಿಚಾರಮುಮಂ ನೋಡಿ ಕೇಳಿ ತಿಳಿವುದು.

ಸೂತ್ರಂ. ೨.

ಕಂ|| ಎಸೆಗುಂ ದೇಹಿಗೆ ಮನದೊಳ್ |
ಬೆಸುಗೆ ಮನಕ್ಕಿಂದ್ರಿಯಂಗಳೊಂದಿಗೆ ಕೂಟಂ ||
ಎಸೆವಿಂದ್ರಿಯಮರ್ಥದೊಳೀ |
ಕ್ಷಿಸೆ ಬಱಿಯಂ ನೆಗೞ್ಗಮರ್ಥಬೋಧೆಯೆ ತಱಿಟಂ ||

ಸೂತ್ರಂ ೩.

ಒದವಿರ್ದ ಚಿತ್ತದಿಂ ತೋ |
ರ್ಪುದು ಭಾವಂ ಭಾವದಿಂದೆ ರಸಮುದಯಿಸುಗುಂ ||
ವದನಮದಂ ಪ್ರಕಟಿಪುದಾ |
ವದನದೆ ರಸವಿಂತಿದೆಂದು ತಿಳಿಗೆ ರಸಜ್ಞರ್ ||

ಸೂತ್ರಂ ೪.

ಭಾವಂ ಮನಃಪ್ರವೃತ್ತಿ ವಿ |
ಭಾವಂ ರಸಪುಷ್ಟಿಯಂ ವಿಶೇಷಿಸುವುದೆ ದಲ್ ||
ಭಾವದೆ ಪುಟ್ಟಿದ ರಸಮುಂ |
ಭಾವುಕರದನಱಿದು ಸವಿವುದೇ ಅನುಭಾವಂ ||

ಸೂತ್ರಂ ೫.

ಸ್ಥಿರತಾಗತದಿಂ ಸ್ಥಾಯಿಯೆ |
ಪರಚೇತೋವೃತ್ತಿ ತಾನೆ ಸತ್ವಮುದಱಿನು ||
ಬ್ಬರಿಕುಂ ಸಾತ್ವಿಕಭಾವಂ |
ಸ್ಥಿರತೆಯೊಳಿರದುದಱಿನಾಯ್ತು ಸಂಚಾರಿ ವಲಂ ||

1. ಇಲ್ಲಿ ಪ್ರಾಯಶಃ ಮೂಲಸೂತ್ರನಾದ ಕಂದವು ಪಾತವಾಗಿರುವಂತೆ ಕಾಣುವುದು. ಮೂಲಪ್ರತಿಯ ಬರವಣಿಗೆಯಿಂದ ಇದು ಸೂಚಿತವಾಗುವುದಿಲ್ಲ.

* ಸೂತ್ರಂ ೬.

ಒದವಿದ ನಾಟಕದೊಳ್ ಕಾ |
ವ್ಯದೊಳೀಕ್ಷಿಸೆ ಪೇೞಲಾದ ಭಾವಾದಿಯನೊ ||
ಳ್ಪೊದವೀಕ್ಷಿಪ ಕೇಳ್ವ ಸಭಾ |
ಸದರ್ಗೆ ರಸೋತ್ಪತ್ತಿಯೆಂದು ಪೇೞ್ವರ್ ಪಿರಿಯರ್ ||

ವ|| ಆ ರಸಂಗಳ (ನ)ಭಿನಯಿಪನೊಳಂ ಸಭ್ಯರೊಳಂ ರಸೋತ್ಪತ್ತಿಯಕ್ಕುಂ.

ಸ್ಥಾಯಿಭಾವಂಗಳ್.

ಸೂತ್ರಂ ೭.

ರತಿ ಪರಿಹಾಸಂ ಶೋಕೋ |
ದ್ಗತಿ ಯುತ್ಸಾಹಂ ಪ್ರಕೋಪವಿಸ್ಮಯಭಯಸಂ ||
ತತಿ ವಿಜುಗುಪ್ಸತೆಯೆಂದು |
ನ್ನತಿವಡೆಗುಂ ಸ್ಥಾಯಿಭಾವವೊಪ್ಪುವ ಶಮಮುಂ ||

ಸಾತ್ವಿಕಭಾವಂಗಳ್.

ಸೂತ್ರಂ ೮.

ಪುಲಕಾಶ್ರುಸ್ವೇದಸ್ತಂ |
ಭಲಯಸ್ವರಭೇದಕಂಪವೈವರ್ಣ್ಯಂಗಳ್ ||
ಸಲೆ ಸಾತ್ವಿಕಭಾವಂಗಳ್ |
ವಿಲಸಿತಕವಿಮಾರ್ಗದಿಂದಮೆಂಟುಂ ತೆಱಗಳ್ ||

ಅನುಭಾವಂಗಳ್.

ಸೂತ್ರಂ ೯.

ಭ್ರುಕುಟಿಮುಖರಾಗಲೋಚನ |
ವಿಕೃತ್ಯಧರಕಂಪನಾತ್ತಕರಚರಣನ್ಯಾ ||
ಸಕವಾಗಾದ್ಯಂಗಕ್ರಿಯೆ |
ಸುಕವಿಗಳಿಂ ಪೇೞಿಸಿಪಟ್ಟುದಿಂತನುಭಾವಂ ||

* ಇಲ್ಲಿ—ಸ್ಥಾಯಿ ಸಂಚಾರಿಯೆಂದೆರ | ಡಾಯಿತ್ತಾಭಾವಂ ಮೊದಲೊಳವುಬಹುವಿಧದಿಂ|| ಸ್ಥಾಯಿಯದೆಂಟುರಸಕ್ಕೆಡೆ | ಯಾಯಿತು ಸಂಚಾರಿಯಾ—

ಎಂಬ ತಪ್ಪಾದ ಕಂದವು ಒಂದು ಪ್ರತಿಯಲ್ಲಿ ಮಾತ್ರವಿದೆ.

ವ್ಯಭಿಚಾರಿಭಾವಂಗಳ್.

ಸೂತ್ರಂ ೧೦.

ಮತಿಲಜ್ಜಾವೇಗಶಂಕಾಮರಣಚಪಲತಾಹರ್ಷನಿರ್ವೇದದೈನ್ಯ ।
ಸ್ಮೃತಿಮೋಹಾಲಸ್ಯಗರ್ವಶ್ರಮಮದಜಡತಾಗ್ಲಾನಿಸಂಸುಪ್ತಿನಿದ್ರಾ ।
ಧೃತಿತರ್ಕೋನ್ಮಾದಬೋಧಾಮಯಸವಿಷಾದೋತ್ಸುಕಾಮರ್ಷಚಿಂತಾ ।
ಸತತಾಸೂಯಾವಹಿತ್ಥೋಗ್ರಸುವಿಲಸದಪಸ್ಮಾರಕಾಖ್ಯಾನದಿಂದಂ ॥

ವ॥ ಈ ಮೂವತ್ತುಮೂಱುಂ ವ್ಯಭಿಚಾರಿಭಾವಂಗಳಿವಂ ಮುಂದೆ ಉದಹರಿಪೆಂ.

ಸೂತ್ರಂ ೧೧.

ಕಂ॥ ವರಶೃಂಗಾರಂ ಹಾಸ್ಯಂ ।
ಕರುಣಂ ವೀರಂ ಪ್ರರೌದ್ರಮದ್ಭುತಮಿರದು ॥
ಬ್ಬರಿಪ ಭಯಾನಕಭೀಭ ।
ತ್ಸರಸಂಗಳಿವೆಂಟು ಮತ್ತೆ ನುತಶಾಂತರಸಂ ॥

ಸೂತ್ರಂ ೧೨.

ಮ॥ಸ್ರ॥ ಹರಿತಂ ಶೃಂಗಾರವರ್ಣಂ ಸಿತರುಚಿ ಹಸಿತಂ ರೌದ್ರಮಾರಕ್ತಯುಕ್ತಂ ।
ಕರುಣಂ ಶ್ಯಾಮಪ್ರಭಾಂಗಂ ಪ್ರಚುರರುಚಿರಗೌರಂ ಸುವೀರಂ ಭಯಂ ಭಾ॥
ಸುರಧೂಮಾಕಾರಮತ್ಯದ್ಭುತಮದು ಕನಕಂ ಕೃಷ್ಣಶುಭ್ರಾನ್ವಿತಂ ವಿ ।
ಸ್ತರದಿಂ ಭೀಭತ್ಸವೆಂಬೀಪರಿಯನಱಿಗೆ ತನ್ಮಾರ್ಗದೊಳ್ ಸತ್ಕವೀಂದ್ರರ್॥

ಸೂತ್ರಂ ೧೩.

ಮ॥ಸ್ರ॥ ನಿರುತಂ ಶೃಂಗಾರಸಾರಕ್ಕಧಿಪತಿ ಹರಿ ಹಾಸಕ್ಕಧೀಶಂ ಗಜಾಸ್ಯಂ ।
ಹರನಾಳ್ದಂ ನಾಡೆ ರೌದ್ರಕ್ಕೆಱಿಯನೆ ಕರುಣಕ್ಕಂತಕಂ ನೋಡೆ ವೀರ ॥
ಕ್ಕರಸಿಂದ್ರಂ ಭೀತಿಗಂ ಮಿಱುವೆ ಗುರು ಬಿದಿ ನಾಥಂ ಪೊದಟ್ಟದ್ಭುತಕ್ಕಂ।
ತಿರಬಾಭೀಭತ್ಸವಿಂಗಂ ಪ್ರಭುವೆಸೆವ ಮಹಾಕಾಳನಾಭೀಳಶೀಳಂ ॥

ವ॥ ಮತ್ತಮಲ್ಲಿ.

ಕಂ॥ ಸಾರಂ ಸಂಸಾರದೊಳಬ ।
ಲಾರತ್ನಂ ಸಾರಮಲ್ಲಿ ಯೌವನಮದಱಿೊಳ್ ॥
ಸಾರಂ ಮಧುರಾಕಾರಂ ।
ಸಾರಂ ಮತ್ತಂತದರ್ಕ್ಕಮನುಕೂಲರಸಂ ॥ ೧೬।

ವೃ|| "ಭೋಗರತ್ನಂ ಮೃಗಾಕ್ಷಿ"ಯೆಂದಪ್ಪುದಱಿಂದೆಲ್ಲಾರಸದೊಳಂ ಶೃಂಗಾರ ರಸಮೆ ಲೋಕಕ್ಕೆ ಸೊಗಯಿಪ್ಪುದಾದ ಕಾರಣದೆ ಮೊದಲೊಳೀ ಶೃಂಗಾರ ರಸಂ ಪೇೞಿಪಟ್ಟುದು. ಅಲ್ಲಿ ಮತ್ತೆ ಕೆಲಂಬರ್ ಆರ್ದ್ರಸ್ಥಾಯಿ ಸ್ನೇಹ ರಸಮೆಂಬರ್. ಅದು ರತ್ಯಂತರದೊಳಂತರ್ಭಾವಂ. ಸ್ತ್ರೀ ಸ್ತ್ರೀಯರ್ಗೆ ಪುರುಷರ್ ಪುರುಷರ್ಗೆ ಸ್ನೇಹಮಾದುದೆಂದೊಡದುವುಂ ರತಿಯೊಳಂತ ರ್ಭಾವಂ. ರಾಮಲಕ್ಷ್ಮಣರ್ ಮೊದಲಾದುವರ ಸ್ನೇಹಂ ಧರ್ಮವೀರ ದೊಳಂತರ್ಭಾವಂ. ಮಾತಾಪಿತೃಗಳೊಳ್ ಬಾಲಕಂ ಮಾಳ್ಪ ಸ್ನೇಹಂ ಭಯ ದೊಳಂತರ್ಭಾವಂ. ಪುತ್ರಾದಿಕಂಗಳಲ್ಲಿಯುಂ ವೃದ್ಧಂಗಂ ಇಂತಱಿವುದು. ಆರ್ದ್ರಸ್ಥಾಯಿ ಲೌಲ್ಯರಸಮೆಂದೊಡದುವುಂ ಹಾಸದಲ್ಲಿ ಮೇಣ್ ರತಿಯಲ್ಲಿ ಮೇಣನ್ಯತ್ರದಲ್ಲಿ ಅಂತರ್ಭಾವಂ. ಈ ಮರ್ಯಾದೆಯಲ್ಲಿ ಭಕ್ತಿಮೊದಲಾ ದುವಂ ಯೋಜಿಸಿಕೊಳ್ವುದು.

ಇಂತು ರತ್ಯಾದಿಸ್ಥಾಯಿ ಯೊಂಭತ್ತು. ಅಲ್ಲಿ ಶೃಂಗಾರಾದಿ ರಸವೊಂ ಭತ್ತು. ಅವಱೊಳ್ ಸ್ಥಾಯಿಭಾವ ಲಕ್ಷಣಂ.

ಪರಸ್ಪರಚೇತೋಬಂಧಾತ್ಮಕಂ ರತಿ - ಚೇತೋವಿಕಾಸಂ ಹಾಸಂ - ಚಿತ್ತ ವೈಧುರ್ಯಂ ಶೋಕಂ-ಸಂರಂಭಸ್ಥಿರತ್ವಮುತ್ಸಾಹಂ-ಸ್ವಾಂತತೈಕ್ಷ್ಣ್ಯಪ್ರಬೋಧಂ ಕ್ರೋಧಂ - ಹೃದ್ವಿಸ್ತಾರಂ ವಿಸ್ಮಯಂ - ಆಕೂತವೈಕ್ಲಬ್ಯಂ ಭಯಂ - ಮನಸ್ಸಂ ಕೋಚಂ ಜುಗುಪ್ಸೆ - ತೃಷ್ಣಾಕ್ಷಯಂ ಶಮಂ—

(ಜುಗುಪ್ಸಾಲಸ್ಯೌಗ್ರ್ಯ ಭಾವವರ್ಜ್ಯಂ ಶೃಂಗಾರಂ)

ಸೂತ್ರಂ. ೧೪.

ಕಂ|| ಆರಯೆ ರತಿಯಿಂದಂ ಶೃಂ |
ಗಾರಂ ಸ್ತ್ರೀಪುಂಸಯೋಗದಿಂ ತೊಲಗಿಕೆಯಿಂ ||
ಸಾರಂ ಸಂಭೋಗಂ ಶೃಂ |
ಗಾರಂ ಸವಿಯೆನಿಪ ವಿಪ್ರಲಂಭಸಮಾಖ್ಯಂ ||

ಸೂತ್ರಂ. ೧೫.

ಇತರೇತರರತಿಯುತದಂ |
ಪತಿಗಳೆ ಯಾಲಂಬನಂ ವಿಭಾವಂ ಜ್ಯೋತ್ಸ್ನೆ ||
ನ್ನತಶಶಿನಂದನಗೀತಾ |
ದಿ ತತೆೋದ್ದೀಪನವಿಭಾವಮುಂ ತಾನಕ್ಕುಂ ||

ಸೂತ್ರಂ. ೧೬.

ವಿನುತೇಕ್ಷಣಾದಿಯಾರಸ |
ಕನುಭಾವಂ ನೆಗೆದ ರೋಮಹರ್ಷಾದಿಗಳಿಂ ||
ಪಿನ ಸಾತ್ವಿಕಂಗಳೆನಿಕುಂ |
ಘನಧೃತಿನಿರ್ವೇದನಾದಿ ಸಂಚಾರಿ ವಲಂ ||

ವೃತ್ತಿ :—ಅನ್ಯೋನ್ಯಮಾಲಂಬನವಿಭಾವಂ. ಆಲಂಬನಗುಣಂ, ಆಲಂಬನಚೇಷ್ಟೆ, ಆಲಂಬನಾಲಂಕರಣಂ, ಆಲಂಬನತಟಸ್ಥಮೆಂದುದ್ದೀಪನವಿಭಾವಮಕ್ಕುಂ. ಅವಂ ಮುಂದೆ ಕಾಣ್ಬುದು. ಆದಿಶಬ್ದದಿಂ ಮೇಖಲಾಸ್ಖಲನಶ್ವಸಿತ ಸಾಧ್ವಸಕೇಶಬಂಧನವಸ್ತ್ರಸಂಯಮನಾನುಲೇಪನಾಭರಣಮಾಲ್ಯಸಮ್ಯಜ್ಞಿವೇಶನಸಮ್ಯಜ್ವಿಚಿತ್ರೇಕ್ಷಣಚಾಟುಪ್ರಭೃತಿವಾಚಿಕಕಾಯಿಕವ್ಯಾಪಾರಾದಿಲಕ್ಷಣಮನುಭಾವಂ. ಅದು ಪರಸ್ಪರಾಲಿಂಗನಾಲೋಕನಚುಂಬನಾದ್ಯನಂತಭೇದಂ. ರೋಮಾಂಚಸ್ವೇದಕಂಪಾಶ್ರುಪ್ರಭೃತಿ ಸಾತ್ವಿಕಭಾವಂ. ಸುಖಮುಯಧೃತಿನಿರ್ವೇದಹರ್ಷಲಜ್ಜಾಮದಗರ್ವಾದಿ ವ್ಯಭಿಚಾರಿಗಳಕ್ಕುಂ. ಇವಱಿಂ ರತಿ ಸ್ಥಾಯಿಭಾವಂ ಚರ್ವ್ಯಮಾಣಮಾಗೆ ಶೃಂಗಾರರಸಂ.

ವ|| ಅಲ್ಲಿಸಂಭೋಗಕ್ಕೆ

ಲಕ್ಷ್ಯಂ.

ಮ|ಸ್ರ|| ಅಲರ್ಗಣ್ ಬೆಂಡೇಱಿ ರೋಮಾಂಚನದೊದವಿನಿತುಂ ಥಾರುಥಟ್ಟಾಗೆ ಬಾಯೊಳ್ |
ಪಲವುಂ ನುಣ್ಮಾತುಗಳ್ ಲಾವುಗೆಯ ಕೊರಳನಲ್ಲಾಡಿದಂತಾಗೆ ಝುಂಮೆಂ||
ದೊಲೆವಂಗಂ ತೂಗೆ ಸುಯ್ಯಂತೊಳಗಿಱಿಯೆ ಬೆವರ್ ಪೊಣ್ಮೆ ನಾಣ್ ಸೂಸೆ ಕಾವೋ |
ಜ್ವಲದಿಂ ಕೆಯ್ಮಿಕ್ಕನುಳ್ಳಂತ್ರನುನಿ ಕೆಡಪಿದಂತಿರ್ವರುಂ ಮೂರ್ಛೆವೋದರ್||

ಮ|ಸ್ರ||ಅತಿಮುಗ್ಧಾಪಾಂಗಭೃಂಗಂ ಮುಖಸರಸಿಜದೊಳ್ ತನ್ನ ಬಾಹಾಭುಜಂಗಂ |
ಸುತನುಶ್ರೀಖಂಡಶಾಖಾಂತರದೊಳಧರಸದ್ವಿದ್ರುಮಂ ದಂತಮುಕ್ತಾ |
ತತಿಯೊಳ್ ಪಾಣಿಪ್ರವಾಳಂ ಕುಚಕಲಶದೊಳಿಂಬಾಗೆ ತಳ್ತಿರ್ದನಿಂತ |
ಪ್ರತಿಮಂ ಲೀಲಾವತೀದೇವಿಯ ಹೃದಯದೊಳಾ ರೂಪಕಂದರ್ಪದೇವಂ ||
೧೮||

ಚಂ|| ಪದುಳಿಸಿದಂಗವೆಟ್ಟಿಱದ ಕಣ್ಮಲರಾಱದ ಸೇದೆ ಮುಗ್ಗಲಿ |
ಕ್ಕದ ಪುಲಕಂಗಳಿಂಗದ ಬೆಮರ್ ಮಿಡುಕೋಡದ ಪುರ್ವು ಬೀಗಿ ಬೀ |
ಯದ ತುಟಿ ಕೆತ್ತುಗುಂದದ ಕುಚಂ ನಡುಕಂಗಿಡದೂರು ಗಂದೆಯೇ |
ಱದ ಕರಘಾತವೊಪ್ಪೆ ಸುಸಿಲಂ ಸವಿದೊಯ್ಯನೆ ಜಾರೆ ಜಾರಿದಳ್ || ೧೯||

ವ|| ಮತ್ತಂ ರುದ್ರಭಟ್ಟನ ರಸಕಳಿಕೆಯ ಪದ್ಧತಿಯಿಂ ಶಂಗಾರೋದ್ದೀಪನಂ ಚತುಷ್ಕಮಾದುದಲ್ಲಿ.

ಸೂತ್ರಂ. ೧೭.

ಕಂ|| ಆಲಂಬನದುರುಗುಣಚೇ |
ಷ್ಟಾಲಂಕೃತಿಯುಂ ತಟಸ್ಥಮೆನಿಪೀನಾಲ್ಕುಂ ||
ಮೇಲಾದುದ್ದೀಪನಮಿಂ |
ನ್ನಾಲಂಬನಗುಣಮೆ ರೂಪಯೌವನಮುಖ್ಯಂ ||

ವ|| ಆಲಂಬನ ಗುಣಕ್ಕೆ.

ಲಕ್ಷ್ಯಂ.

ಮ|ಸ್ರ|| ಕರುವಿಟ್ಟಂ ಕಾಮದೇವಂ ರತಿಯತಿಶಯದಿಂ ಬಣ್ಣವಿಟ್ಟಳ್ ಬಸಂತಂ |
ಬರೆದಂ ಸರ್ವಾಂಗಮಂ ಕಣ್ದೆಱೆದನೊಸೆದು ಶೀತಾಂಶು ಚೈತ್ರಾನಿಲಂ ಶೀ ||
ಮಿರೆ ಜೀವಂಬೊಯ್ದನಂತಲ್ಲದೊಡೆ ಸೊಗಯಿಪೀರೂಪಮೀಬಣ್ಣಮೀಮೆ |
ಯ್ಸಿರಿ ಯೀಕಣ್ಚೆಲ್ಲ ಮೀಭಾವಕವೊಗೆಯದೆನಲ್ ಕಾಂತೆ ಕಣ್ಗೆಡ್ಡಮಾದಳ್||

ವ|| ಮತ್ತಂ.

ಚಂ|| ಕಡೆದವೊಲಿರ್ಪ ಪೆರ್ವೊಲೆ ತೊಡಳ್ನಡಿ ಮೆಲ್ನಡೆ ಚೆಲ್ವನಾಂತ ತೆ |
ಳ್ನಡು ನಳಿತೋಳ್ ಪೊದಱ್ದಧರಮೊತ್ತದೆಯುಂ ಸಿಱಿಗೊಂಡ ಚುಂಚುಸೋ||
ರ್ಮುಡಿ ಕಡುನುಣ್ಪುವೆತ್ತ ತೊಡೆ ತುಂಬಿದ ಪೀನಸಿತಂಬಬಿಂಬಮೊ |
ಕ್ಕುಡಿತೆಯನಿಪ್ಪ ಕಣ್ ಕರಮ ರಂಜಿಸೆ ಬಂದರಿಳೇಶಕಾಂತೆಯರ್ || ೨೦||
(ಇದು ರೂಪಂ).

ಚಂ|| ಮಗಮುಗಿಸಿತ್ತು ತೋಳ ಮೊದಲಾನನಮುಳ್ಳರಲಾಯ್ತು ಕಣ್ಮಲರ್ |
ವಿಗೆ ನಿಡಿದಾಯ್ತು ಮೂಡಿದುವು ಪೇರುರದೊಳ್ ಮುಕುಳಸ್ತನಂಗಳೂ ||
ರುಗಳಿಡೆ ನುಣ್ಪನಾಂತುದು ಬಸಿಱ್ ಬಡವಾದುದು ಬಾಸೆ ನೀಟಿಳ್ದುದಾ |
ಕೆಗೆ ಬರೆ ಜವ್ವನಂ ಬೞಿಕೆ ಬಂದುದು ಕಾಮನ ಕೆಯ್ಗೆ ಕಾರ್ಮುಕಂ || ೨೨||

ಕಂ|| ಮನದ ವಿವೇಕಂ ಪೀನ |
ಸ್ತನದೊಳ್ ನಾಲಗೆಯ ಮಾತು ಕಣ್ಣೊಳ್ ಕರತ ||
ರ್ಜನಮುಮರೆ ನಿವಿರ್ದ ಪುರ್ವಿನ |
ಕೊನೆಯೊಳ್ ನೆಲಸಿದುದು ಯೌವನಂ ನೆಲಸಲೊಡಂ || ೨೩||

(ಇದಾಲಂಬನಗುಣಂ ಯೌವನಂ)

ಸೂತ್ರಂ. ೧೮.

ಕಂ|| ತರದಾಲಂಬನಚೇಷ್ಟೆಯ |
ಪರ ತದನುಭವಂಗಳೆಂದೆರಡಱಿತ್ತಿಱನಲ್ಲಿಂ ||
ನೆರಡನೆಯದೇಕರೂಪಂ |
ಪರಮೆಂಬುದು ವಿಂಶತಿಪ್ರಕಾರಮೆನಿಕ್ಕುಂ ||

ವ|| ಅಲ್ಲಿ ಯಾಲಂಬನಾನುಭವಮೆ ತದನುಭವಮುದಂ ಮೊದಲೆ ಪೇೞ್ವೆಂ.

ಚಂ|| ಇನಿಯನನಲ್ಕುಱಿಂ ಚದುರ ನೋಡುವ ನೋಡಿಪ ಲಲ್ಲೆವಾತಿನೊಂ |
ದಿಸಿದನೆ ಸೂಸುವಂತೆ ನೆಗೞ್ದೋದಿಪ ತಾನೊಸೆದಪ್ಪುವಪ್ಪಿಪಿಂ ||
ಮನೆ ಸವಿಗೆಯ್ದು ಚುಂಬಿಸುವ ಚುಂಬನಕಾಂಪ ವಿನೋದಕೇಳಿಯೊಳ್ |
ಮನಸಿಜತಂತ್ರದೀಕ್ಷೆಯಧಿದೇವತೆಯಂತವಳಾದವೊಪ್ಪಿದಳ್ || ೨೪||

(ಇಂತು ತದನುಭವಂ.)

ವ|| ಇನ್ನು ಪರಮೆಂಬುದಱಿೊಳಗೆ.

ಸೂತ್ರಂ ೧೯.

ಕಂ|| ವರ ಭಾವ ಹಾವ ಹೇಳೆಗ |
ಳುರುಶೋಭಾ ಕಾಂತಿ ದೀಪ್ತಿ ಮಾಧುರ್ಯಂಗಳ್ ||
ತರದಿಂ ಪ್ರಾಗಲ್ಭ್ಯೌದಾ |
ರ್ಯರುಚಿರಧೈರ್ಯಂಗಳೆಂಬಿವೀರ್ಪ್ಪದುತೆಱಂ ||

ವ|| ಅನ್ಯ್ರತಾನಂದಿಯಿಂದೀಭಾವಾದಿತ್ರಯಂಗಳಂಗಸಮುದ್ಭವಂಗಳ್. ಶೋಭಾದಿ ಸಪ್ತಕಂ ಶೃಂಗಾರಭಾವಜಂಗಳ್. ಮುಂದಣ ಆ ಪತ್ತುಂ ಸ್ವಾಭಾವಿಕಂಗಳ್.

ಸೂತ್ರಂ ೨೦.

ಕಂ|| ವಿಲಸಿತ ಭಾವಂ ಮನದ ವೊ |
ದಲ ವಿಕ್ರಿಯೆ ಮುಂಡಣೆಸೆವಲಂಕಾರಕ್ಕಂ ||
ದಲಿದು(ಂ) ಶಿಂಗರದೊ(ಳ್) ತಾಂ |
ಸಲ್ ನೇತ್ರಭ್ರೂವಿಕಾರಮಿತ್ತೊಡೆ ಹಾವಂ ||

ಲಕ್ಷ್ಯಂ.

ಚಂ|| ವನರುಹನೇತ್ರೆಯೀಕುವರಿ ನಾಣಱಿದಪ್ಪಿದ ಕಾಮದಿಂದಮಾ |
ವನುಮನದೆಂದಿನಂತೆ ನೆಱೆ ನೋಡದ ಸೋಂಕದಳಾದಳಾನತಾ ||
ನನೆ ರತವಾರ್ತೆಯಂ ಸಖಿಯರಂದೊಡೆ ಲಾಲಿಸಳೀಗಳೀಗಳಿಂ |
ದೆನೆ ತಳೆಯಲ್ ಸ್ವಯಂವರಮನಾಱಳೆ ಮಾಡುಗೆ ಭೂಪನೋಲಳಿಂ ||೨೫||

ಕಂ|| ವಿೂಸಲ್ ವಾಯ್ದೊಱೆ ನಗೆ ಪ್ರೂಱ |
ಸೂಸದ ಕಣ್ ಬಳಸದಲಸದೊಳ್ದೊಡೆ ಲಜ್ಜಾ ||
ಭಾಸಮುನೋಸರಿಸದ ಬಗೆ |
ಮಾಸರಮಾಯ್ತವಳೊಳೊಗೆದ ಕೊಡುಗೂಸುತನಂ || ೨೬||

(ಇದು ಭಾವಂ)

ಕಂ|| ಎಳೆಯಳಿರುತೆನ್ನ ಪಕ್ಕದೊ |
ಳೆಳಸಿ ಮನೋಜಾತರೂಪ ತಾನೆನ್ನನೆ ಕ ||
ಣ್ಗೊಳಿಪ ನೆವದಿಂದೆ ನಿನ್ನಂ |
ಬಳೆದನುರಾಗದೊಳೆ ನೋಡಿದಳ್ ಕಡೆಗಣ್ಣಿಂ || ೨೭||

(ಇದು ಹಾವಂ)

ಸೂತ್ರಂ ೨೧.

ಕಂ|| ಅಂತೆಸೆವಾಹಾವಮುದ |
ತ್ಯಂತವ್ಯಕ್ತಿಯನೆ ತಾಳ್ದಿ ಶೃಂಗಾರಮನೊ ||
ಲ್ದಾಂತುದ್ಯೋತಿಸಿದೊಡೆ ಸಲೆ |
ಕಾಂತಂ ಪೆಸರಿಂದೆ ಹೇಳೆಯೆಂಬುದು ಸಲ್ಗುಂ ||

ಲಕ್ಷ್ಯಂ

ಕಂ|| ನಿಮಿರ್ದುವು ಪೊಳೆದುವಳುಂಕಿದ |
ವಮರ್ದುವು ಚುಂಬಿಸಿದುವಪ್ಪಿದುವು ಸಂಭ್ರಮದಿಂ ||
ಸಮದೃಷ್ಟಿಯಾಗಿ ಸಿಲ್ಕಿದು |
ವೆಮೆಯಿಕ್ಕಲ್ ಮಱೆದುದವಳ ಧವಳಕಟಾಕ್ಷಂ || ೨೮||

ಮ|| ಹರಿನೀಲಚ್ಛವಿ ಪುಂಡರೀಕನಯನಂ ವಿಸ್ತೀರ್ಣವಕ್ಷಃಸ್ಥಳಂ |
ಪರಿವೃತ್ತಾಯತಬಾಹು ಪೀವರನಿತಂಬಂ ಗಂಡರೊಳ್ ನೀರನೆಂ ||
ಬರ ಮಾತಂ ಕಿವಿಯಾಱೆ ಕೇಳ್ದು ಕಿವಿವೇಟಂಗೊಂಡು ಕಣ್ಣಾರ್ವಿನಂ |
ಹರಿಯಂ ನೋಡಿದಳಾಕೆ ತನ್ನ ಕಡೆಗಣ್ಗಳ್ ಬೀಱೆ ಬೆಳ್ದಿಂಗಳಂ || ೨೯||

(ಇದು ಹೇಳೆ)

ಸೂತ್ರಂ ೨೨.

ಕಂ|| ರೂಪೋಪಭೋಗತಾರು |
ಣ್ಯಾಪೂರ್ಣದಿನೊಗೆದಲಂಕೃತಿಯೆ ಶೋಭೆ ವಲಂ ||
ಆ ಪದೆದ ಶೋಭೆ ರಾಗ |
ವ್ಯಾಪಾರದೆ ನಿಬಿಡಮಾಗೆ ಕಾಂತಿಯೆನಿಕ್ಕುಂ ||

ಲಕ್ಷ್ಯಂ.

ಮ|| ನಯನಾಕರ್ಷಣಮಂತ್ರದೇವತೆಯ ಚೇತೋಜಾತಸಾಮ್ರಾಜ್ಯಲ |
ಕ್ಷ್ಮಿಯ ಲಾವಣ್ಯರಸಾಂಬುರಾಶಿಯ ಲಸದ್ವಿದ್ಯಾಧರಾಧೀಶಪು ||
ತ್ರಿಯ ದಿವ್ಯಾಂಗಮನೊಲ್ದು ರನ್ನದೊಡವಿಂ ಕೆಯ್ಗಯ್ದು ಪೆಂಪಿಂ ವಿದ |
ಗ್ಧೆಯರಂಘೇನೆಮೆಯಿಕ್ಕದೀಕ್ಷಿಸಿದರೋ ಕೆಯ್ಗಣ್ಮಿದೊಂದಱ್ಕೆಯಿಂ|| ೩೦||

(ಇದು ಶೋಭೆ)

ಮ|ಸ್ರ|| ಎಳಮಿಂಚಿಂದೊಪ್ಪವಿಟ್ಟಂತಮರ್ದಿನ ಕಳೆ ರೂಪಾಂತುದೆಂಬಂತೆ ಮುತ್ತಂ|
ತೊಳೆದಿಟ್ಟಂತಂಗಜಾತಂ ಮಸೆದು ಪಿಡಿದ ಕೂರ್ವಾಳಿದೆಂಬಂತೆ ಡಾಳಂ ||
ಪೊಳೆವುತ್ತುಂ ಸುತ್ತಲುಂ ನೋಳ್ಪರ ಬಗೆಗೆ ಭಯಂ ಪುಟ್ಟೆತಳ್ಪೊಯ್ಯೆ ತತ್ಕೋ |
ಮಳೆ ಚೆಲ್ವಿಂದೊಪ್ಪಿ ಬರ್ಪಂಗಜನ ಗಜದವೋಲ್ನಾಡೆ ಕಣ್ಗೆಡ್ಡಮಾದಳ್ ||

(ಇದು ಕಾಂತಿ)

ಸೂತ್ರಂ ೨೩.

ಕಂ|| ಕಾಂತಿಯೆ ಬಿತ್ತರಮಾಗಲೊ |
ಡಂ ತಾಂ **ದೀಪ್ತಿ**ಯೆನಿಕ್ಕುಮದಹೀನದ್ರ ||
ವ್ಯಾಂತರಯೋಗದೊಳಂ ಚೆ |
ಲ್ವಂ ತಾಳ್ದಿದ ರಮ್ಯತಾಗುಣಂ **ಮಾಧುರ್ಯಂ** ||

ಲಕ್ಷ್ಯಂ.

ಕಂ|| ತೊಳತೊಳಪ ಕೋಮಲಾಂಗದ |
ಬೆಳಗಿಂ ಮರದೆಲೆಯ ಕಲ್ತಿ ಲೆಯನಟ್ಟುತೆ ಕೋ ||
ಮಳೆ ಕಾಮನ ದೀವಿಗೆವೋಲ್ |
ತಳರ್ದಳ್ ನಿಜಪತಿಯ ಕೂಡೆ ನಂದನವನದೊಳ್ || ೩೭||

ವ|| ಮತ್ತಂ.

ಮ|ಸ್ರ|| ಬಿಸಿಲಂ ಲಾವಣ್ಯದಿಂ ನುಣ್ಪಡರೆ ಬೆಳಗುತುಂ ನೀಳ್ದಪಾಂಗಂಗಳಿಂ ನು |
ಣ್ಣಿಸುತುಂ ದಿಕ್ಕಾಮಿನೀಸಂಕುಲಮನಮಳಹಾಸಪ್ರಭಾಪೂರದಿಂ ಪು ||
ಟ್ಟಿಸುತುಂ ತಳ್ತಚ್ಚವೆಳ್ದಿಂಗಳನವಯವಶೃಂಗಾರವಾರಾಶಿಯೊಳ್ ತೇಂ |
ಕಿಸುತುಂ ವಕ್ತ್ರೇಂದುವಂ ಬಂದುದು ನೆಱೆದಿದಿರಂ ವಾರನಾರೀಕದಂಬಂ ||
(ಇದು ದೀಪ್ತಿ)

ಕಂ|| ಕಱೆಯಿರಯ್ಯುಂ ಶಶಿಕಳೆ ಸಿರಿ |
ನೆಱೆದಂತಿರೆ ನಾರ ಸೀರೆಯುಟ್ಟೊಡಮಾ ಪೆಣ್ ||
ನೆಱೆ ರಂಜಿಸುತಿರ್ದಳ್ ಮನ |
ದೆಱೆಯನ ಸಂಗಡದೊಳಟ್ಟಿಯಿಂಬಾಯೆಡೆಯೊಳ್ || ೩೮||
(ಇದು ಮಾಧುರ್ಯಂ)

ಸೂತ್ರಂ ೨೪.

ಮ|| ಎನಸುಂ ಲಜ್ಜೆಯಿನಾದ ಭೀತಿಯ ತವಿಲ್ **ಪ್ರಾಗಲ್ಭ್ಯ**ಮಾ ಪೆಣ್ಣ ಪೆಂ |
ಪೆಸಿತಾಯಾಸದೊಳಂ ಲಸದ್ವಿನಯಬಾಹುಳ್ಯಂ **ದಲೌದಾರ್ಯ**ಮಿ ||
ಘನಚಾಪಲ್ಯದ ಪೆರ್ಮೆಯಿಂ ಕಿಡದ ಚೇತೋವೃತ್ತಿ ತಾಂ **ಧೈರ್ಯ**ಮಿಂ |
**ತೆನೆ ಸಂದೊಪ್ಪಿತು ಸರ್ಮವೆತ್ತ ಸುಕವೀಂದ್ರರ್ ಪ್ರೋಕ್ತಮಾರ್ಗಂಗಳಿಂ** ||

ಲಕ್ಷ್ಯಂ.

ಚಂ|| ಪೊಸಸುಸಿಲೊಳ್ ನೃಪಾತ್ಮಜೆ ವಿದಗ್ಧೆಯವೋಲ್ ಪ್ರಿಯನೊಲ್ದು ಮೇಳಿಪೊಂ|
ದೆಸಕದೆ ನಾಣನೊಕ್ಕು ಗತಭೀತಿಯಿನಪ್ಪುವ ಮುದ್ದುಗೆಯ್ವ ಚುಂ ||
ಬಿಸುವ ಮರಲ್ವ ಮೆಯ್ಯುಗುಡುವ ಮೆಯ್ಮಱವೆಚ್ಚು ಱುವಾಱುವಾಸೆಗೆ |
ಯ್ವಸಿಯಳದೇಂ ಮನಂಬಿಡಿದಳೋ ಚದುರಿಂ ಸುದತೀಮನೋಜನಾ ||೩೫ ||
(ಇದು ಪ್ರಾಗಲ್ಭ್ಯಂ)

ಮ|| ನಡೆದೊರ್ಗಾವುದಮಂ ಪ್ರಿಯಂಬೆರಸು ಬೇನಾರ್ಡಿಂಗೆ ಪೋದಂದು ಮೆ |
ಲ್ಲಡಿಗಳ್ ನೊಂದು ಸಿರೀಷಕೋಮಳೆಯಳುಂಬಂ ಸೇದೆವಟ್ಟಿರ್ದುಮಾ ||
ಗಡೆ ತನ್ನೊಂದು ಬಱಲ್ಕೆಯಂ ಮಱೆದು ಚಿತ್ತಾಧೀಶನಂಘ್ರಿದ್ವಯಂ |
ಬಿಡಿದೊತ್ತುತ್ತುಪಚಾರವಾಗಲಮರ್ದೇಂ ಚಿತ್ತಕ್ಕೆ ತಣ್ಪಿತ್ತಳೋ || ೩೬||
(ಇದು ಔದಾರ್ಯಂ)

ಉ|| ಕೂರಿಸಬೇಡವಂಗೆಳಸಿ ಮುಂ ಬಸವಾದರ ಕಾಮದಾಹಮಂ |
ನಾರಿ ನಿರೀಕ್ಷಿಸೆಂದ ಸಖಿವಾಕ್ಯಮನೊಲ್ಲದೆ ತಂದೆ ತಾಯ್ಗಳಂ ||
ದೂರಿಸಿ ತಂಗಿಯೇಂ ಸುಖಮನುಂಡಪೆ ಯೆಂಬಿನೆ ನಿನ್ನ ಮಾತು ತಾಂ |
ಸೇರದು ಮಾಱಿದೆಂ ಮನಮನೆಂದಪೆ ಧೈರ್ಯಮಿದೆಂತು ಸಾರ್ದುದೋ||೩೭||

ವ|| ಮತ್ತಂ.

ಮ|| ಅನಿತಂ ಗೆಯ್ದುಱಿಯೆಂಬ ತಾಯ ನುಡಿಯಂ ಕೆಯ್ಕೊಂಡೆನೇ ನಂಟರೀ |
ತನ ನಣ್ಪಂ ಬಿಸುಡೆಂದೊಡಾನುಡಿಯನಾನೇಗೊಂಡೆನೇ ನಾಣನೆ ||
ಳ್ಪನಿತಂ ಕಾದೆನೆ ಬೇಡಿದೊಂದು ಪುರುಳಂ ಮಾರ್ಕೊಂಡೆನೇ ಬೇಡ ಬೇ |
ಡೆನೆ ಕಂಡಾನೆರೆದಟ್ಟಿಯುಂ ಬಗೆಯನೇಂ ಗಂಡಂ ಮನಂಗಂಡನೋ || ೩೮||
(ಇದು ಧೈರ್ಯಂ)

ಸೂತ್ರಂ. ೨೫.

ಕಂ|| ಸತಿಗಾತ್ಮಕೇಳಿ ಮೊಟ್ಟಾ |
ಯಿತ ಬಿಬ್ಬೋಕಾಖ್ಯಲಲಿತ ಲೀಲಾಕಿಳಿಕಿಂ ||
ಚಿತ ವಿಚ್ಛಿತ್ತಿ ವಿಳಾಸ ವಿ |
ಹೃತ ವಿಭ್ರಮ ಕುಟ್ಟಮಿತಮೆನಲ್ ಪತ್ತು ತೆಱಂ ||

ವ|| ಇವು ಸ್ವಾಭಾವಿಕಂಗಳೆಂದಱಿವುದು.

ಸೂತ್ರಂ. ೨೬.

ಮ॥ ಕೃತಚಿತ್ರೋತ್ತಮಬುದ್ಧಿಯಿಂ ರಮಣಿ ಕಾಂತಧ್ಯಾನದಿಂದಂಗಭಂ ।
ಗತೆಯಂ ಪೆತ್ತಿದಱಿಂದವಿಂತೆರಡು ಭೇದಂ ನೋಡೆ **ಮೊಟ್ಟಾಯಿತಂ** ॥
ಪತಿಯೊಳ್ ಬೆಚ್ಚೊಲವಂ ಪರರ್ಗಱಿಪದಂತಿರ್ಪಂಗನಾಕೃತ್ಯದಿಂ ।
ಧೃತಗರ್ವಾದಿಯಿನಾದನಾದರತೆಯಿಂ ಬಿಬ್ಬೋಕಮಿಂತಿರ್ಕೆಱಿಂ ॥

ವ॥ ಅಲ್ಲಿ ಪೂರ್ವಾರ್ಧಕ್ಕೆ

ಲಕ್ಷ್ಯಂ.

ಚಂ॥ ಇನಿಯನೆ ನೀನೆ ನೀಂ ನೆಗೞಿದಂದಮನೀಕ್ಷಿಸೆನುತ್ತೆ ಕೂರ್ತ ಕಾ ।
ಮಿನಿ ಕೃತದೋಷಿಯಾದವನೆ ಭೋಂಕನೆ ತನ್ನ ಪದಕ್ಕೆ ನಮ್ರನಾ ॥
ದನುವುಮನಾಗಳೀೞಿರ್ದ್ದುದೆದು ತಾಂ ಮಿಗೆ ಜರ್ವ್ವನ ರೀತಿಯಂ ಜಲ ।
ಕ್ಕನೆ ನಿಜಹಸ್ತದಿಂ ಬರೆದು ತೋಱಿದಳೊಪ್ಪುವ ಭಾವಚಿತ್ರದಿಂ ॥　೩೯॥

ವ॥ ಮತ್ತಂ.

ಮ|ಸ್ರ॥ ಒಡವೋದರ್ ಒಂದರೆಂಬೀ ನುಡಿಯನೆ ಪೆಱರಿಂ ಕೇಳ್ದು ಕೇಳ್ದಂತೆ ಸಾಸಿ ।
ರ್ಮಡಿ ರಾಗಂ ತನ್ನೊಳಾಗಳ್ ಪುದಿದಿರೆ ನಿಜಚಿತ್ತೇಶ್ವರಂ ಬಾರನೆಂಬೀ ॥
ಪಡಿಮಾತಂ ಕೇಳ್ದು ಕೇಳ್ದಂತೆರ್ದೆ ಪಡಿದೆಱಿದಂತಾಗೆ ಬೆಂಬಿಟ್ಟವಳ್ನೂ ।
ರ್ಮಡಿ ಮುನ್ನಿಂ ಕುಂದಿದಳ್ ತಕ್ಷ್ಣಣದೊಳೆ ಮದನಾಗ್ನಿಪ್ರಸಂತಾಪ
[ದಿಂದಂ ॥ ೪೦॥

(ಇವೆರಡುಂ ಮೊಟ್ಟಾಯಿತಂ)

* ಮ|ಸ್ರ॥ ಪರಿದೆಯ್ದಲ್ಕೆಯ್ದಿ ನೋಡಲ್ ನುಡಿಸಲೊಡರಿಸಲ್ಕಾಗಳುಂ ತೀಡುವಂತಃ।
ಕರಣವ್ಯಾಪಾರಮಂ ಮೆಲ್ಲನೆ ಮಱಿಸಿ ತವಾಲೋಕನಾಲಾಪದಿಂದಂ ॥
ಪರಿಹಾಸಂಗೆಯ್ದು ತನ್ನೋಪನೊಳಭಿಮುಖಸಂಸಿದ್ಧಿಯಂತೀರ್ಚಿಕೊಂಡೆ।
ಲ್ಲರುಮಂ ದೂಱುತ್ತುಮಿರ್ಪಂಗನೆಯರ ಬಗೆಯುಂ ಭಾವಿಸಲ್ ಬಲ್ಲ
[ನಾವಂ ॥ ೪೧॥

---

* ಒಂದು ಪ್ರತಿಯಲ್ಲಿ ಈಪದ್ಯಕ್ಕೆ ಬದಲಾಗಿ ಈಪದ್ಯವಿದೆ.

ಚಂ॥ ಮಸೆದಱಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲ ।
ಜ್ಜಿಸಿ ತಲೆ ಬಾಗಿ ಕಣ್ದು ಮಣಿಕುಟ್ಟಿಮದೊಳ್ ನೆಱೆ ನೋಡಿ ಕಂಡು ಮಾ ॥
ನಸದೊಳಗಿಟ್ಟೊಡಂ ನವಸುಖಾನುಭವಕ್ಕರೆ ಮುಚ್ಚಿ ಕಣ್ಗಳಂ ।
ಪಸರಿಪ ಹೋಮಘೂಮತತಿಗೆಂದು ಶಶಿಪ್ರಭೆ ದೂರನೇಱಿಪಳ್ ॥

ವ|| ಮತ್ತಂ.

ಕಂ|| ಅಣಿಯರಮೆನ್ನಂ ನಲ್ಲಂ ।
ಪ್ರಣಯದಿನೆಳಸುತ್ತೆ ಸೊಂಕುತುಂ ಬರೆ ಸಖಿ ಕೇ ||
ಳಣಿಯರದಿಂದವನಂ ಕಡೆ ।
ಗಣಿಸಿದೆನೇಂ ತಪ್ಪುಗಂಡು ಪೈರಿಪರೊಳರೇ || ೪೨||
(ಇವೆರಡುಂ ಬಿಬ್ಬೋಕಂ)

ಸೂತ್ರಂ. ೨೭.

ಕಂ|| ಭಾಸುರಸುಕುಮಾರಾಂಗ ।
ನ್ಯಾಸಂ ಲಲಿತಂ ಪ್ರಿಯಾಚರಣಮುಂ ನಗೆಯಿಂ ||
ಲೇಸಾಗಭಿನಯಿಪೊಡೆ ಕೇ ।
ಳಾಸುದತಿಯ ನೆಗಟ್ದಲೀಲೆ ಲೀಲೆಯೆನಿಕ್ಕುಂ ||

ಲಕ್ಷ್ಯಂ.

ಮ|| ನಗೆಗಣ್ ಸೂಸೆ ವಿಲಾಸಮಂ ನಗೆಮೊಗಂ ಲಾವಣ್ಯಮಂ ಬೀಱೆ ಸಾ ।
ವಗಿಸುತ್ತಂ ಕಚಬಂಧಮುಂ ಶಿಥಿಲಸೀವೀಬಂಧಮುಂ ಕಾಂಚಿಯೊಳ್ ||
ತೆಗೆಯುತ್ತುಂ ಸ್ಮರಮಂತ್ರದೇವತೆಯವೋಲ್ ಬಾಹಾಲತಾಂದೋಳನಂ ।
ಬಗೆಯಂ ಬಲ್ಸೆಱೆಗೆಯ್ಯೆ ಬಾಲೆ ನೆಱೆದಳ್ ಲೀಲಾಪದನ್ಯಾಸಮಂ ||೪೩||

ವ|| ಮತ್ತಂ.

ಮ|| ಕುಡುವುರ್ವಂ ನಸುನೀವುತುಂ ತಿಳಕಮಂ ತಿರ್ದುತ್ತುಮಾಸ್ಯಾಬ್ಜಮಂ ।
ತೊಡೆಯುತ್ತುಂ ಕುಟಿಲಾಲಕಾವಳಿಗಳಂ ಸಯ್ತೊತ್ತಿ ಚೆಲ್ವಾಗೆ ನೇ ||
ರ್ಪಡಿಸುತ್ತುಂ ಮಧುರಾಲಸೇಕ್ಷಣೆ ಮುಪಸ್ತಂಬೇರಮಾಕಾರದಿಂ ।
ನಡೆ ಪಾಡುತ್ತುಮುಪಾಂಗಣಪ್ರಘಣದೊಳ್ ತನ್ವಂಗಿ ಕಣ್ಗೊಪ್ಪಿದಳ್ ||
(ಇದು ಲಲಿತಂ)

ಮ|| ಪ್ರಿಯೆ ತನ್ನೋಪನ ಕೆಯ್ತಮುಂ ನುಡಿವ ಚಾತುರ್ಯೋಕ್ತಿಯಂ ನೋೞ್ಪ ಭಂ।
ಗಿಯನಿರ್ಪಂದವನಾಳಿಗೊಳ್ವ ತೆಱದಿಂ ತಾನಲ್ಕುಱಿಂ ಚಿತ್ತದೊಳ್ ||
ನಿಯತಂ ಭಾವಿಸಿ ತಾನೆ ಮಾಡಯುಮುದಂ ಕೊಂಡಾಡಿಯುಂ ಕೂಡೆ ನೋ ।
ಡಿಯುಮಿರ್ದೊಪ್ಪಿಯುಮಿಂತದೇಂ ನಲಿದಳೋ ತತ್ಕಾಂತೆಯೇಕಾಂತದೊಳ್||
(ಇದು ಲೀಲೆ)

ಸೂತ್ರಂ ೨೮.

ಕಂ|| ಸಂತೋಷರೋಷಭಯನಯ ।
ಚಿಂತಾದಿಗಳಣಮೆ ನೆಱೆಯೆ ಕಿಳಿಕಿಂಚಿತವೊ||
ಳ್ಪಾಂತಲ್ಪಾಭರಣದೆ ಚೆ ।
ಲ್ವಂ ತಾಂ ತಳೆದವಳ ಕೇಳಿ ವಿಚ್ಛಿತ್ತಿ ವಲಂ ||

ಲಕ್ಷ್ಯಂ.

ಉ|| ಆತಸಿನಾದ ಬೇಟಮುಭಿಜಾತತೆಯಿಂ ನೆಗೞ್ದೊಂದು ಧೈರ್ಯಮಂ ।
ತಾತಸಿನಾದ ಭೀತಿ ನಿಜಬಾಲ್ಯಮನುಣ್ಮಿದ ಲಜ್ಜೆ ಹೃತ್ಸಮು ||
ದ್ಭೂತಸಿನಾದ ಸೊರ್ಕು ಸುಚರಿತ್ರತೆಯಿಂ ಸಲೆಸಂದ ಸೌಷ್ಠವಂ ।
ಚೇತದೊಳುಣ್ಮೆ ಕನ್ನೆ ತಳೆದಳ್ ಕಿಳಿಕಿಂಚಿತಭಾವಚೇಷ್ಟೆಯಂ || ೪೬||
(ಇದು ಕಿಳಿಕಿಂಚಿತಂ)

ಚಂ|| ಕಳೆ ತುಡಸಲ್ಕದೇಂ ತುಡುಗೆಯಂ ಸಹಜಾಂಗದ ಕಾಂತಿಯಿಂದಮು ।
ಗ್ಗಳಮೆ ವಿಲೇಪನಂಗಳಿವು ಬೇಡ್ಕುಮೆ ಸಾಲದೆ ಸಂಜನಿಂ ಮನಂ ||
ಗೊಳಿಸುವ ಗಂಧಮಾಸತಿಗೆ ಮಂಗಳಸಾಧನಮಾದ ತಾರಹಾರಮುಂ ।
ತಿಳಕಮುಮಾರುಮಂ ಮುಸುಳಿಸಲ್ ನೆಱೆಗುಂ ಮೃಗಶಾಬನೇತ್ರೆಯಾ||೪೭||
(ಇದು ವಿಚ್ಛಿತ್ತಿ)

ಸೂತ್ರಂ ೨೯.

ಕಂ|| ವಾಸಾಸನಾದಿಯಂಗ ।
ನ್ಯಾಸಾದಿವಿಶೇಷಮುಂ ವಿಲಾಸಂ ನಾಣಿಂ ||
ಲೇಸಾಗಿ ನುಡಿಯ ತಕ್ಕುದ ।
ನಾಸತಿ ನುಡಿಯದ ಗಭೀರತೆಯ ವಿಹೃತಾಖ್ಯಂ ||

ಲಕ್ಷ್ಯಂ.

ಮ|ಸ್ರ|| ಕಳಕಾಂಚೀಕ್ಷುದ್ರಘಂಟಾನಿನದಮೆಸೆವಿನಂ ಬಂದು ತನ್ವಂಗಿ ಸಾಭ್ರ||
ಸ್ಥಳದೊಳ್ ಕುಳ್ಳಿರ್ದು ತನ್ನೊಳ್ಪನ ತೊಡೆಯನವಷ್ಟಂಭದಿಂದೇಱೆ ವೀಣಾ||
ಕಳನಾದಂ ಕಂಠನಾದಕ್ಕನುಗತಮೆನೆ ತದ್ವಲ್ಲಕೀವಾದನವ್ಯಾ ।
ಜಳತಾಂಗನ್ಯಾಸದೊಳ್ಪಂ ತಳೆದಿರೆ ಮುದದಿಂ ಪಾಡಿದಳ್ ಕಾಂತೆಯೊರ್ವಳ್||
(ಇದು ವಿಳಾಸಂ)

ಉ|| ಎನ್ನನೆ ಕೂರ್ತು ಮೆಲ್ಪರದೆ ಪಾಡುತೆ ಪಟ್ಟಿರೆ ಕೇಳುತಾಗಳಾ ।
ನೆನ್ನದೆ ಪಾಡು ಪಾಡೆನುತೆ ಬರ್ಪುದುಮೆಯ್ದೆ ನತಾನನಾಬ್ಜದಿಂ ||
ದೆನ್ನೊಳದೇನುಮಂ ನುಡಿಯದುಂಗುಟದಿಂ ಬರೆಯುತ್ತೆ ಭೂಮಿಯಂ |
ರನ್ನದ ಕಂಕಣಂದಿರಿಪುತುಂ ನೆಱೆ ನಿಂದಳನೆಂದು ಕಾಣ್ಬೆನೋ || ೪೯||
(ಇದು ವಿಹೃತಂ)

ಸೂತ್ರಂ ೩೦.

ಮ|| ಮದರಾಗಾದಿಯಿನಾದ ವಿಭ್ರಮದ ಸತ್ಪ್ರೋದ್ಯೋಗಮುಂ ಕಾಮವೋ |
ಹದೆ ತಾಂ ಪಲ್ಲಟಮಾಗಿ ಸಿಂಗರಿಸಿ ಕೊಳ್ವೊಂದಂದಮುಂ ವಿಭ್ರಮಂ ||
ವಿದಿತಂ ಕುಟ್ಟಮಿತಂ ಮನಃಪ್ರಿಯನ ಸೋಂಕಂ ಚಿತ್ತದಿಂದೊಲ್ದುವೊ |
ಲ್ಲದಳಂ ತಾಗಿಯೆ ಬಾಹ್ಯದೊಳ್ ಪ್ರಿಯೆಯೆ ಗೆಯ್ವಾಕೂಟಮಿಂತೊಪ್ಪುಗುಂ||

ಲಕ್ಷ್ಯಂ.

ಮ|| ಮದಿರಾಪಾನವಿಕಾರಮುಂ ನವವಯಸ್ಸಂಪತ್ತಿಯುಂ ಬಂದು ನೋ |
ಡದವೋಲ್ ನೋಡುವ ನಲ್ಲನಿರ್ದಿರವುಮೊಂದುತ್ಸಾಹಮಂ ಮಾಡೆ ಚಿ ||
ತ್ತದೊಳಾಗಳ್ ತನುಮಧ್ಯೆಗೇನೆಸೆದುದೋ ನೃತ್ಯಂ ಚತುರ್ಭಂಗಿ ಭೇ ।
ದದ ಲೀಲಾಭಿನಯಪ್ರಧಾನವಿಧಿಯಿಂ ಕಾದಂಬರೀಗೋಷ್ಠಿಯೊಳ್ || ೫೦||

ವ|| ಮತ್ತಂ.

ಚಂ|| ಪಸದನವಾಂಪ ವೇಳೆಯೊಳೆ ರಾಗದಿನಾಂ ಬರೆ ಕಾಮುಮ್ಮುರ್ದ್ದ ತಾ |
ನಸವಸದಿಂ ಕೊರಲ್ಗೆ ಕಲಕಾಂಚಿಯನೊಪ್ಪುವ ತಾರಹಾರಮಂ ||
ಮಿಸುಪ ಸಿತಂಬಕಂದುಗೆಯನೊಳ್ನಳಿದೋಳ್ಗಿರದಿಟ್ಟು ನಲ್ಮೆಯಿಂ |
ಶಶಿಮುಖಿ ಯನ್ನನಪ್ಪಿ ಮನಮಂ ನಗಿಸಿರ್ದುದನೆಲ್ಲಿ ಕಾಣ್ಬೆನೋ || ೫೧||
(ಇವೆರಡುಂ ವಿಭ್ರಮಂ)

ಮ|| ಸುದತೀರತ್ನಮೆ ಕಾದಲಂ ನೆಱೆಯೊಱಲ್ದಾಲಿಂಗನಂ ಮಾಡೆ ಮು |
ಟ್ಟದಿರೆನ್ನಂ ತೊಲಗೆಂದು ಮೆಯ್ದೆಗೆವಿನಂ ನಿನ್ನೊಂದು ಕಾದಲ್ಮೆಯಿಂ ||
ಮುದಮಂ ತಾಂ ಗುಡಿಗಟ್ಟೆ ಚಿತ್ತರಿಪವೋಲ್ ರೋಮಾಂಚನಂ ಮೆಯ್ಯೊಳಿ|
ಬ್ಬದಿಗಂ ಮೂಡಿರೆ ಬಲ್ಮೆಯೇಕೆ ಸುಸಿಲಂಗೆಯ್ವಂದವಿಂ ಕೃತವಂ || ೫೨ ||

ಚಂ|| ಪದೆಪಮರ್ದಪ್ಪೆ ಚಪ್ಪಲದರ್ ಪೆರ್ವೊರಲೆ ಪೀಱಿ ಪೊದೞ್ದು ಪೊಂಗಿ ಬೀ |
ಗಿದ ಬೆಳರ್ವಾಯ್ ತಗುಳ್ದುಗಿಯೆ ನೀಳ್ದ ನಖವ್ರಣವೀೞ್ದು ಪೊಯ್ಯೆ ಪಾ ||
ಱಿದ ತಲೆ ತನ್ನೊಳೊಪ್ಪೆ ಸುರತಾಂತ್ಯದೊಳೆನ್ನಯ ಮುಂದೆ ಸಿಂದು ಮೇ |
ಲುದಱಿರೊಳೆ ಬೀಸುತುಂ ಬೆಮರನಾಱಿಸುವೋಪಳೆಸೆಂದುಗಾಣ್ಬೆನೋ||೫೩||

ವ|| ಮತ್ತವೋಷ್ಠಗ್ರಹಣಾದಿಸುಖಪೀಡಾವಿಭವಂ **ಕುಟ್ಟಮಿತಂ.**

ಲಕ್ಷ್ಯಂ.

ಉ|| ಚುಂಬಿಸೆ ಬೀಗಿ ಬೆಳ್ಪಡರ್ದ ಬಾಯ್ದಱಿ ಯಾಳಿಸಿದಪ್ಪಿನೊತ್ತಿ ಸಿಂ |
ದಂಬಿಡೆ ಗುಜ್ಜುಗೊಂಡ ವೊಲೆ ಪೋರ್ಕುಳಿಯಿಂದಮೆ ಪಂತಿದಪ್ಪಿ ತಾ ||
ಱುಂಟಿಳಿಯಿಂ ತೆರಳ್ದ ಕುರುಳುಣ್ಮೆ ಬೆಮರ್ ನಸು ಬಾನಲಾದ ಬೊ |
ಟ್ಟುಂಬಿವು ಕೂಟದೊಂದು ಸವಿಯುಂ ಪಿಸುಣಾಡುವುವೀಲತಾಂಗಿಯಾ ||೫೪||
(ಇವು ಮೂಱುಂ ಕುಟ್ಟಮಿತಂ)

ವ|| ಇನ್ನಾಲಂಬನಾಲಂಕಾರಕ್ಕೆ.—

ಸೂತ್ರಂ ೩೧.

ಕಂ|| ಮೃದುವಸನಮಾಲ್ಯಭೂಷಣ |
ಮುದಚಂದನಪತ್ರಭಂಗಧೂಪಸ್ನಾನಂ ||
ಪದೆದಿರೆ ತಚ್ಚಿಹ್ನಾದ್ಯಂ |
ಮುದದಾಲಂಬನದ ಮೆಱೆವಲಂಕಾರಂಗಳ್ ||

ಲಕ್ಷ್ಯಂ.

ಚಂ|| ಸುದತಿಯು ದಿವ್ಯಗಂಧತನುಚಂದನಶಾಖೆಯೊಳಂಗಜಾಹಿ ಯಿ |
ಕ್ಕಿದ ಪೆರೆಯಂತಿರುಟ್ಟ ದುಗುಲಂ ಕುಚಕೋಕಯುಗಂಗಳಡ್ಡಗ ||
ಚಿರ್ದ ಬಿಸದಂತೆ ಹಾರಲತೆ ಕಣ್ಗೆ ಕರಂ ಸುಲಿಪಲ್ಲ ಕಾಂತಿಯೊ |
ಪ್ಪಿದುದು ಸುಧಾಂಶುಬಿಂಬವೆಳಮುತ್ತನೆ ಮುಕ್ಕುಳಿಸಿದುರ್ದೆಂಬಿನಂ || ೫೫||

ವ|| ಅಂತುಮಲ್ಲದೆಯುಂ.—

ಚಂ|| ಕಡೆದನೊ ಚಂದ್ರಕಾಂತಮಣಿಯಿಂ ಮದನಂ ಬಿಸಕಾಂಡಗರ್ಭದಿಂ |
ಪಡೆದನೊ ಪದ್ಮಗರ್ಭನೆನೆ ಭೂಷಣವಸ್ತ್ರವಿಲೇಪನಾಂಶುಗಳ್ ||
ಪಡೆಯೆ ವಿಲಾಸಮಂ ದಶನದೀಧಿತಿಯಿಂ ದರಹಾಸಲಕ್ಷ್ಮಿ ನೂ |
ರ್ಮಡಿಸೆ ಬೆಡಂಗುವೆತ್ತುದು ನರೇಂದ್ರವಧೂಧವಳಪ್ರಸಾಧನಂ || ೫೬ ||

ವ|| ಇಂತಾಲಂಬನಾಲಂಕಾರಮಖಿಳಕಾವ್ಯಪ್ರಸಿದ್ಧ ಮಾದುದಱಿಂದಲ್ಲಿ ವಿಶೇಷ ಮನಱಿಗೆ.

ವ|| ಇನ್ನು ತಟಸ್ಥಂ.

ಸೂತ್ರಂ ೩೨.

ಚಂ|| ಸಸಿಯುದಯಂ ಮುಗಿಲ್ಮೊಳಗು ನಂದನವೊಪ್ಪುವ ಚಂದನಂ ಲಸ |
ತ್ಕುಸುಮವಸಂತಮಂತೆ ರಿತು ಭೃಂಗಪಿಕಾಳಿರವಂ ಕೊಳಂ ಬನಂ ||
ಮಿಸುಗುವ ಕಪ್ಪುರಂ ಶಿಶಿರಶೀತಜಲಂ ನಱುದಂಬುಲಂ ಸುಗೀ |
ತಸರಸದೂತಿವಾಕ್ಪ್ರಭೃತಿ ಮುಂ ಪೆಸರ್ಗೊಂಡ ತಟಸ್ಥಮಲ್ಲದೇ ||

ಲಕ್ಷ್ಯಂ.

ಶಾ|| ಆಟಂ ಬಾಜನೆ ಗಾಡಿಯೊಳ್ಪಸದನಂ ಬೆಳ್ದಿಂಗಳೊಳ್ಮಾತು ಕೊಂ |
ಡಾಟಂ ಕತ್ತುರಿ ಕಪ್ಪುರಂ ನಗೆ ತೆಗಱ್ ಕೂಟಂ ಬಿಯಂ ಜವ್ವನಂ ||
ನೋಟಂ ತಂಬುಲಮಿಂಪು ಕಂಪು ವಿಭವಂ ಮೆಯ್ಮೇಳಮೆಂಬಿಂತಿವಂ |
ಬೇಟಕ್ಕಾಗರಮೆಂಬೆನಣ್ಣ ಸುಸಿಲೇಂ ಪೇಱ್ ಪಾಗದೊಳ್ ತೀರ್ಗುಮೇ ||

ವ|| ಮತ್ತಂ.

ಕಂ|| ಕುಳಿರ್ವೆಲರುಮಾಲಿನೀರುಂ |
ತಳಿರ್ವಾಸುಂ ಚಂದ್ರಕಾಂತಮುಂ ಚಂದನಮುಂ ||
ಕೊಳನುಂ ನಂದನವನಮುಂ |
ಕಳೆಯವೆ ಬೇಸಗೆಯೊಳೊಗೆದ ಬೇಟದ ಸೂಡಂ || ೫೮ ||

(ಇಂತು ತಟಸ್ಥಂ)

ವೃ|| ಇಂತಾಲಂಬನಗುಣಚೇಷ್ಟಾಲಂಕಾರತಟಸ್ಥಂಗಳೆಂದುದ್ದೀಪನವಿಭಾವಮುಂ ಪೇೞ್ದಿಂ ಇನ್ನಾ ವಿಪ್ರಲಂಭಮುಂ ಪೇೞ್ವೆಂ.

* ಸೂ|| ವಿಯೋಗಮೆ ವಿಪ್ರಲಂಭಂ.

ವೃತ್ತಿ|| ಅಲ್ಲಿ ನೋಯಿಸಲ್ಪಟ್ಟ ನಲ್ಲರಾಲಂಬನವಿಭಾವಂ; ಅಂತೆ ನಂದನಕಾಸಾರ ಚಂದ್ರಿಕಾಶೀತಾಂಬುತಾಂಬೂಲಕುಸುಮಶಯ್ಯಾದಿ ಯುದ್ದೀಪನವಿಭಾವಂ; ಅಂತೆ ಸಂತಾಪಕಾರ್ಶ್ಯಜಾಗರಪ್ರಲಾಪಕ್ಷಾಮನೇತ್ರತ್ವದೀನಸಂಚರಣಾನುಕರಣಾಕೃತಿವಿಲೇಖನಸಂದೇಶಶೀತಸೇವನಾದಿ ಯನುಭಾವಂ; ಅಶ್ರುವಿವರ್ಣಸ್ತಂಭ ಕಂಪಾದಿಸಾತ್ವಿಕಂ;ಶಂಕಾಔತ್ಸುಕ್ಯಮದಗ್ಲಾನಿನಿದ್ರಾಸುಪ್ತಿಪ್ರಬೋಧಚಿಂತಾಸೂಯಾಶ್ರಮನಿರ್ವೇದಮರಣೋನ್ಮಾದಜಡತಾ (ವ್ಯಾಧ್ಯ) ಪಸ್ಮಾರಾದಿ ವ್ಯಭಿಚಾರಿಗಳಕ್ಕುಂ. ಅದು.

ಸೂತ್ರಂ ೩೩.

ಕಂ|| ಪರಿಭಾವಿಸುವೊಡೆ ಪೂರ್ವಾ |
ನುರಾಗಮಾನಾಖ್ಯಕಂ ಪ್ರವಾಸಾಖ್ಯಾನಂ ||
ಕರುಣಾತ್ಮಕಮೆಂದಿಂತವ |
ಧರಿಸೆ ಚತುರ್ಭಂಗಿ ವಿಪ್ರಲಂಭದ ಭೇದಂ ||

ಸೂತ್ರಂ ೩೪.

ಕಂ|| ನೋಡಿ ನುಡಿದೊಲ್ದು ಕೂಟಂ |
ಕೂಡದ ಮನನೊಂದು ಚಲದೆ ತಿಳಿಯದ ನಲ್ಲರ್ ||
ನಾಡತ್ತ ಪೋದಱಿದ ನೋ |
ವಾಡಲಿದೇ ತಱಿದೆ ವಿಪ್ರಲಂಭಚತುಷ್ಕಂ ||

ವ|| ಅಲ್ಲಿ ಪೂರ್ವಾನುರಾಗಮೆಂಬುದಭಿಲಾಷೆ; ಅದು ದೈವಪಾರವಶ್ಯಮೆಂಬಿತ್ತೆಱಿಂ

* ಈ ಸೂತ್ರಭಾಗವು ವಾಕ್ಯರೂಪದಲ್ಲಿದೆ. ಕಂದರೂಪದಲ್ಲಿಲ್ಲದುದಱಿಂದ ಸೂತ್ರಸಂಖ್ಯೆಯನ್ನು ಕೊಡಲಿಲ್ಲ. ಪ್ರಾಯಶಃ ಇಲ್ಲಿಯ ಸೂತ್ರಗಳೆಲ್ಲವೂ ಕಂದರೂಪದಲ್ಲಿರುವುದರಿಂದ ಇದು ಕಂದಭಾಗವಾಗಿರಬಹುದೋ ಏನೋ, ಎಂಬ ಸಂದೇಹಕ್ಕೆ ಅವಕಾಶವಿದೆ

ಸೂತ್ರಂ ೩೫.

ಕಂ॥ ಸಮಸಂದು ನೋಡಿಯುಂ ನುಡಿ ।
ದು ಮನಂಗೊ[ಳೆ ಕೊ]ಂಡು ಕೂರ್ತು ಕೂಟಂ ತಪ್ಪೊಳ್ ॥
ಸಮನಿಸದೆ ಮರುಗುವಾಮರು ।
ಕಮುಮದು ಪೂರ್ವಾನುರಾಗಮೆನೆ ಪೆಸರ್ವಡೆಗುಂ ॥

ಲಕ್ಷ್ಯಂ

ಚಂ॥ ಪೊಸಸುಸಿಲೊಳ್ ನೃಪಾತ್ಮಜೆಯೊಳಿಂತು ವರಂ ಪಡೆಯಲ್ಕೆ ಕೂರ್ತು ಪೂ।
ವಸೆಗೆಸೆವಾಕೆಯುಂ ಬರಿಪುದುಂ ನಭದಿಂದೆ ನಿಶಾಚರೇಶನೀ ॥
ಕ್ಷೆಸಿ ಪಗೆ ಬಂದು ತನ್ನೃಪತನೂ (ಜನ) ನೊಯ್ದು ಬಿಸುಟ್ಟು ಪೋಗೆ ತ ।
ನ್ನ ಸುವೆನಿಪೋಪಳಂ ನೆನೆದಟಿಲ್ದುಬಟಿಲ್ದನವಂ ವನಾಂತದೊಳ್ ॥ ೫೯॥

ವ॥ ಮತ್ತಂ.

ಮ॥ ಪಡೆವೆತ್ತಿರ್ವರ ಜೀವವೊಂದೊಡಲೆ ಬೇಱೆಂಬಂತುಟಂ ಮಾಡಿದಂ ।
ಮದನಂಗಾವುದು ದೋಷಮುಂತೆ ನುಡಿಯಲ್ಕೇನಕ್ಕುಮೇ ಪಾಪಮಂ ॥
ಬಿದಿಯೆಂಬಾಱಡಿಗಳ್ಪನಿಂದಮುಱೆವಾಯ್ತಿರ್ವರ್ಗವಿನ್ನೊರ್ಮೆ ದೈ ।
ವದಿನೆತ್ತಾನುಮದಿಂದುಬಿಂಬಮುಖಿಯಂ ಕಾಣ್ಬೊಂದು ಸೃಪಕ್ಕುಮೇ ॥೬೦॥
(ಇವು ದೈವವಶಾಭಿಲಾಷೆ)

ಕಂ॥ ನೃಪಸುತೆಯಂ ತಾಂ ತನ್ನಂ ।
ನೃಪಸುತೆ ನೞಿ ನೋಡಿ (ನೋಡಿ)ತಂತಪ್ಪೊಳ್ ಕೂ ॥
ರ್ತು ಪಡೆಯದೆ ಸುರತಮುಮಂ ಬಿರ ।
ಯಿಪರಾದರ್ ಮೋಹಿಗಳ್ ಪರಾಧೀನತೆಯಿಂ ॥ ೬೧॥
(ಇದು ಪಾರವಶ್ಯಂ)

ವ॥ ಇನ್ನು ಮಾನಾಖ್ಯವಿಪ್ರಲಂಭಂ.

ಸೂತ್ರಂ ೩೬,

ಕಂ॥ ಸ್ಫುರದೀರ್ಷ್ಯಾಪ್ರಣಯಮೆನು ।
ತ್ತಿರೆಱಿಱಿಱು ಮಾನಮಲ್ಲಿ ತತ್ಪ್ರಣಯಾಖ್ಯಂ ॥
ಪುರುಷನೊಳಂ ಸ್ತ್ರೀಯೊಳವಿ ।
ರ್ವರೊಳಕ್ಕುಂ ಸ್ತ್ರೀಯರಲ್ಲದಿರಲೀರ್ಷ್ಯೆ ವಲಂ ॥

ಲಕ್ಷ್ಯಂ.

ಕ॥ ಮುಳಿಸೆಂಬುದು ನೇಹದ ಮುಂ ।
ಬೆಳಸು ನೃಪಾ ಪೆಣ್ಣ ಜವ್ವನಂ ಸುರಧನುವೆಂ ॥
ಬಳ ನುಡಿಯೆಡನ್ನೈದಲರ್ಗಣೆ ।
ಗಳಾಗಳೇಂ ನೆಲಸಿದುದೊ ಮಹೀಶನ ಮನದೊಳ್ ॥ ೬೨॥

(ಇದು ಪುರುಷಪ್ರಣಯಮಾನಂ)

ಮ|ಸ್ರ॥ ಬಿಡದಿಂತೇಂ ಕಾರಣಂ ಕೆತ್ತಿದಪುವೆನಗೆ ಪೇಟಿಕ್ಕ ಮೆಯ್ಯೋೞಲಿಂದಿ ।
ನ್ನಿಡಗಣ್ಣುಂ ತೋಳುಮೆನ್ನೀತೊಡೆಯುಮಿನಯನಾದೇಶಮಂ ಮಾಟ್ಪು [ವಿನ್ನೀ ।
ಗಡಮೆನ್ನೊಳ್ ಬೇಟಮಿನ್ನುಂ ಗಡ ಪರಿಪರಿದೀೞ್ದಪ್ಪಿ ಕೊಳ್ವಾಟವಿ [ನ್ನುಂ ।
ಗಡ ಕೂಟಂ ಸಾಲ್ಗುಮೆಂದುಣ್ಮಿದ ಮನದಳಲಿಂ ಕಾಂತೆ ವಿಭ್ರಾಂತೆಯಾ [ದಳ್॥

(ಇದು ಸ್ತ್ರೀಪ್ರಣಯಮಾನಂ)

ಕಂ॥ ತಿಳಿಪುವ ದೂತಿಗಡಿಂನರಿ ।
ದಳೆಯಳ್ ತಳಿರ್ವಾಸಿನೊಳ್ ಪ್ರಿಯಂ ಪೂವಸೆಯೊಳ್ ॥
ಬಳೆದ ವಿರಹಾಗ್ನಿಯಿಂದಿರೆ ।
ಮುಳಿದಾರ್ ಬರ್ದುಕಲ್ಕೆ ಬಲ್ಲರತನುವ ನಾಡೊಳ್ ॥ ೬೪॥

(ಇದುಭಯಪ್ರಣಯಮಾನಂ)

ಉ॥ ಇಂನೆವರಂ ಸಖೀ ರಮಣನೆನ್ನವನಾಗಿರುತಿರ್ಪನಿಂದು ತಾ ।
ನೆಂನವನೆಂಬೆ ನುಣ್ಣೊಸಲೊಳೊಂದಿದಲಕ್ತಕಲಾಂಛನಂ ರತಾಂ ॥
ಕಂ ನಿವಿಡಂಗದೊಳ್ ಮೆಱಿಯೆ ನೋಡುತೆ ಕಾಯ್ದು ನೂಂಕಿದೆಂ ।
ಮಂನಿಸದೆನ್ನ ಜೀವವನೆ ನೂಂಕುವಪ್ರೋಲ್ ಪ್ರಿಯನಂ ಕೃತಘ್ನೆಯಾಂ॥೬೫॥

(ಇದು ಈರ್ಷ್ಯಾಮಾನಂ)

ವ॥ ಇನಾ ಪ್ರವಾಸಾಖ್ಯ ವಿಪ್ರಲಂಭಂ.

ಸೂತ್ರಂ ೨೭

ಕ॥ ಇದು ಕಾರ್ಯಶಾಪಸಂಭ್ರಮ ।
ದೊದವಿಂ ಪ್ರಾವಾಸಮಾಯ್ತು ಮೂಱಿಱಿನವಱೊಳ್ ॥
ಮೊದಲೆರಡನ್ವರ್ಥಂಗಳ್ ।
(ಪದೆಪಿನ) ಭಾವಾದಿಯಿಂದೆ ಸಂಭ್ರಮಮಕ್ಕುಂ ॥

ವ|| ಅಲ್ಲಿ ಕಾರ್ಯಕ್ಕೆ.

ಚಂ|| ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾ ।
ವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಮಂತೆ ನೀನುಮೆ ॥
ನ್ನನೆ ನಡೆ ನೋಡುತುಂ ನಭದೊಳಿರ್ದಪೆಯಪ್ಪುದಱಿಂದೆ ನಿನ್ನನಾ ।
ನನುವಿಪೆನೆನ್ನ ಮೆಯ್ ಬಡವೊ ನಲ್ಲನ ಮೆಯ್ ಬಡವೋ ನಿಶಾಕರಾ ॥ ೬೬॥

ವ|| ಮತ್ತಂ.

ಮ|ಸ್ರ|| ಎಳಪುಂಚಿಲ್ಲಕ್ಕುಮಾಖಂಡಲಜನಿತಧನುರ್ದಂಡಮಿಲ್ಲಕ್ಕುಮಭ್ರಾ ।
ವಳಿಯಿಲ್ಲಕ್ಕುಂ ಕದಂಬಾನಿಲನೆಳಸುವೊಡಿಲ್ಲಕ್ಕುಮುದ್ಯನ್ಮಯೂರೀ ॥
ಕುಳಲೀಲಾತಾಂಡವಾಡಂಬರವಿಲಸನಮಿಲ್ಲಕ್ಕುಮಂತಾ ಮಹೀಮಂ ।
ಡಳದತ್ತಲ್ ನಲ್ಲನಂತಲ್ಲದೊಡೆ ತಡೆದದೇಕಿರ್ಪನಿಂದಲ್ತೆ ಬರ್ಪಂ ॥ ೬೭॥

(ಇವೆರಡುಂ ಕಾರ್ಯಪ್ರವಾಸವಿಪ್ರಲಂಭಂ)

ಚಂ|| ಪಱುಗಳಿದಱ್ತಿಯಿಂದೆ ಸುರತಾಮೃತಮಂ ಸವಿವುತ್ತೆ ತಳ್ತು ತ ।
ಣ್ಪೆಱಲೊಳಶೋಕೆಯೊಳ್ದಳಿರ್ಗಳೊಟ್ಟಿಲೊಳಿನ್ನೊಡನಿರ್ದ ನಲ್ಲನಂ ॥
ಘುಱಿಲನೆ ಕಂಡು ಪಾಪಿ ಋಷಿಶಾಪಮೆ ತಾಂ ಪರದೇಶದತ್ತ ಕೊಂ ।
ಡೆಱೆದುದು ಕಾಣ್ಬುದಪ್ಪುವುದು ಕೂಡುವುದಿನ್ನೆನಗೆಂದು ಸಾರ್ಗುವೋ ॥

(ಇದು ಶಾಪವಿಪ್ರಲಂಭಂ)

ವ|| ಇದು ಮೇಘಸಂದೇಶದೊಳಮುಂಟು.

ಕಂ|| ಸೀತೆ ಮಣಿಮುದ್ರೆಯಂ ಕಂ ।
ಡೇತೆಱದಿಂದಿರ್ದಳಂತೆ ಚೂಡಾಮಣಿಯಂ ॥
ಸೀತಾಪತಿ ಕಂಡು ಮನೋ ।
ಜಾತಾಗ್ನಿಯನೆಯ್ದೆ ಬೆಂದು ಸುಱುಗುತ್ತಿರ್ದಂ ॥ ೬೯॥

ಚಂ|| ಪರನೃಪನೆನ್ನ ಮಿತ್ರಪುರಮಂ ತವೆ ಮುತ್ತಿದನೆಂದು ಕೇಳ್ದು ಚೆ ।
ಚ್ಚರವಿಂದೆ ಬಂದೆನಿತ್ತಲವನತ್ತ ಮಡೀಯಪುರಪ್ರಭಾಗಮಂ ॥
ಭರದೆ ತಱುಂಬಿದಂ ಗಡವನಂ ತಗುಳ್ದಟ್ಟುವೆ ನಾತ್ತ ಕಾಂತೆ ಮೆ ।
ಯ್ಗರೆವಳೊ ಯೆನ್ನ ಜಾನದೊಳೆ ಸಾವಳೊ ಏನನೆಂಬಳೋ ॥ ೭೦॥

(ಇದು ಸಂಭ್ರಮವಿಪ್ರಲಂಭಂ)

ವ|| ಅಂತು ವಿಪ್ರಲಂಭಮೇೞುತೆಱಂ, ಕರುಣಾತ್ಮಕವಿಪ್ರಲಂಭಮೆಂಬುದಂ ಕೆಲಂಬರ್ ಕಡೆಯವಸ್ಥೆಯೊಳೇಕರೂಪಮೆಂದೊಲ್ಲರ್, (ಕೆಲರ್ ಕರುಣ ರಸಮೆಂದೊಲ್ಲರ್) ಕೆಲರಿಂತೊಲ್ವರದರ್ಕೆ.

ಸೂತ್ರಂ ೩೮.

ಕಂ|| ಪರಮಪ್ರಿಯರೆತ್ತಾನುಂ !
ಪರಲೋಕಪ್ರಾಪ್ತರಾದೊಡವರ ಪರೋಕ್ಷಾಂ ||
ತರದೊಳ್ ಮರುಗುವ ಮರುಕಂ |
ಕರುಣಾತ್ಮಕವಿಪ್ರಲಂಭಮೆನೆ ಪೆಸರ್ವಡೆಗುಂ ||

ಲಕ್ಷ್ಯಂ.

ಮ|| ಇವನಿಂತೀಕೆಗೆ ಗಂಡನೆಂದೊಡೆನಗೀಗಳ್ ರಾಜ್ಯಮಾದಂತೆ ತೋ |
ಱುವುದೆತ್ತಾನುಮಗಲ್ದು ಪೋದೊಡವನಿನ್ನುಂ ಬರ್ಕುಮಾನೊಮ್ಮೆ ಕಾ ||
ಡುವೆನೆಂಬಾಸೆಯೊಳಂತುಮಾಱುವೆನದಿನ್ನಾವಾಸೆಯಿಂದೀಗಳಾ |
ಱುವೆನಾರಂ ಬರಪಾರ್ವೆನೆಂತು ಕಱಿವೆಂ ಪ್ರಾಣ್ಪಂ ವಿಲೋಲೇಕ್ಷಣೇ ||೭೦||
(ಇದು ಕರುಣವಿಪ್ರಲಂಭಂ)

ವ|| ಇನ್ನವಱವಸ್ಥೆಗಳಂ ಪೇೞ್ವೆಂ.

ಸೂತ್ರಂ ೩೯.

ಕಂ|| ನಯನರತಿ ಚಿಂತೆ ಸಂಕ |
ಲ್ಪಯುತಂ ಜಾಗರತೆ ಕಾರ್ಶ್ಯಮರತಿಯುಮಾನಂ ||
ಪ್ರಿಯೆಯ ವಿಮೋಹಂ ಮೂರ್ಛಾ |
ಶ್ರಯಂ ಮರಣಮಿಂತವಸ್ಥೆ ದಶವಿಧಮಕ್ಕುಂ ||

ಸೂತ್ರಂ ೪೦.

ಕಂ|| ಚಕ್ಷುಃಪ್ರೀತಿಯದಿನಿಯನ ।
ನೀಕ್ಷಿಪುದುಱಿ ನೆನೆವುದದೆ ಮನಸ್ಸಂಗಂ ಲೋ ||
ಲಾಕ್ಷಿ ಮನದಲ್ಲಿ ಸಂಕ |
ಲ್ಪಕ್ಷೇಪದೆ ನೆರೆವುದದುವೆ ಸಂಕಲ್ಪಾಖ್ಯಂ ||

ಲಕ್ಷ್ಯಂ.

ಮ|| ಕಡೆಗಣ್ಣಿಂ ಕಡೆಗೋಡಿವೋಗೆ ಪಿರಿದುಂ ಚೆಲ್ಲಂ ಕುಚದ್ವಂದ್ವದಿ |
ಟ್ಟೆಡೆಯಿಂ ಸ್ವೇದಜಲಂ ತುಳುಂಕೆ ಜಘನಾಂತರ್ದೇಶದಿಂದಾವಗಂ ||
ಬಿಡದುಣ್ಮುತ್ತಿರೆ ಮನ್ಮಥದ್ರವಮನಂಗಾವೇಶದಿಂ ಕಾಲ್ ತಡಂ |
ಬಡೆ ಬಂದಾಟಿಸಿ ನೋಡಿದಳ್ ಪದೆಪಿನಿಂ ಶ್ರೀವಿಕ್ರಮಾರ್ತಂಡನಂ || ೭೨||
(ಇದು ಚಕ್ಷುಃಪ್ರೀತಿ)

ಚಂ|| ನೆನೆವಳೆ ಬೇಱಿದೊಂದನೆಡೆಗೊಂಡುದು ಮುನ್ನಮೆ ನಿನ್ನ ಪಂಬಲಾ |
ಮನಮನದಂತೆ ನೋಡುವಳೆ ಚಿತ್ರಿಸ ಬಂದುದು ನಿನ್ನ ರೂಪು ಕಾ ||
ಮಿನಿಯೆರಡಕ್ಷಿಯೊಳ್ ನೆಲನುಮಾಗಸಮುಂ ದೆಸೆಯುಂ ನಿನತ್ತು ರೂ|
ಪನೆ ತಳೆಸೊಪ್ಪಿ ತೋಱುವುದು ನೀರೆಗೆ ನಿನ್ನಯ ಮಾಯೆಯೇಂ ನೃಪಾ ||
(ಇದು ಮನಸ್ಸಂಗಂ)

ಚಂ|| ಹೃದಯದೊಳಪ್ಪಿ ತನ್ನ ಮನದೊಳ್ ಮಧುರಾಧರಮುಂ ಸಾದ್ರ್ರಚಿ |
ತ್ತದೊಳೆರ್ದೆಗೊಳ್ವ ಚುಂಬನಮನಾಗಿಸಿ ಬೇಟದಳುರ್ಕೆಯಿಂದೆ ಚೇ ||
ತದೊಳೆ ಲತಾಂಗಿ ನಿನ್ನ ನೊಡಗೂಡಿ ಸುಖಾಮೃತಸೀಂಪೆಚಪ್ಪಳಂ |
ತೊದವಿದ ಭಾವಿತಾತ್ಮೆ ನೆಱೆ ನೋವನದೆಲ್ಲಿಯುಮೇಕೆ ತಾಳ್ದಿದಳ್ || ೭೪||

ವ|| ಮತ್ತಂ.

ಚಂ|| ಮೃಗಮದಗಂಧಿ ಸಜ್ಜೆವನೆಯಂಚೆಯ ತುಪ್ಪುಱ ತಳ್ಪದೊಳ್ ಮನಂ |
ಬುಗೆ ಪಟದಲ್ಲಿ ನಿನ್ನ ನೆಸೆವ ರೂಪನೆ ಚಿತ್ರಿಸಿ ನೋಡಿ ನೋಡಿ ಕೆಯ್ ||
ಮಿಗೆ ಕಡುವೇಟದಱ್ತಿಯಿನದಂ ಸಲೆ ಚುಂಬಿಸ ಮುಯ್ಗೆಯ್ವ ತಾಂ |
ಬಿಗಿಬಿಗಿದಪ್ಪುವಳ್ಕಱಿಸೊಳೆ ಸೂಂಕಿದಳಂದಿನ ರಾತ್ರಿಯಂ ನೃಪಾ || ೭೫||
(ಇದು ಸಂಕಲ್ಪಂ)

ಸೂತ್ರಂ ೪೧.

ಕಂ|| ನೆನೆಥೊಱಗದದುವೆ ಜಾಗರೆ |
ವಿನಿಯನನುಱೆ ಬಯಸಿ ಒಡಬಿಡಾಗಿರೆ ಕಾರ್ಶ್ಯಂ ||
ವನಿತೆ ವಿಷಯಕ್ಕೆ ಮೆಯ್ಗೊಡ |
ದನು ವರತಿಯೆ ಲಜ್ಜೆ ವಿರಹದಳೆದುದವಾಾನಂ ||

ಲಕ್ಷ್ಯಂ.

ಚಂ|| ಕನಸಿನೊಳೆನ್ನ ವಲ್ಲಭನನಿಂತೊಡಗೂಡಿದೆನೆಂದು ಪೇೞ್ವ ಕಾ |
ಮಿನಿಯರುದಾತ್ತೆಯರ್ ಕೆಲರದೇಂ ಕೃತಪುಣ್ಯೆಯರಕ್ಕ ದುಃಖಭಾ |
ಜನೆಗೆನಗೆನ್ನ ವಲ್ಲಭನಗಲ್ಕೆಯೊಳಾಗದು ನಿದ್ರೆಯೆಂದೊಡಾ |
ಕನಸೆನಗೆಲ್ಲಿತೆಂತೆನಗೆ ವಲ್ಲಭನೊಳ್ ನೆರೆವಾಸೆಯಲ್ಲಿತೋ || ೨೬||

ವ|| ಮತ್ತಂ.

ಮ|ಸ್ರ||ಪತಿ ಚಿಂತಾವಿದ್ಧೆ ನಿದ್ರಾವಿರಹಿತೆ ಯಿರುಳೆಯ್ತರ್ಪುದುಂ ಸುಪ್ತಪಾರಾ |
ವತಮಂ ಬಂದೆತ್ತುವಳ್ ಹಂಸೆಗಳೆರಡೆವೆಯೊಂದಾಗಲೀಯಳ್ ನವಿಲ್ಗಾ ||
ಣತಿಯಂ ಕಣ್ಮುಚ್ಚಲೀಯಳ್ ಸಲಪುವ ಗಿಳಿಯಂ ತೂಂಕಡಂಗಾಣಲೀಯಳ್ |
ಕತೆಯಂ ಪೇೞಿಂದವಳ್ ಸಾರಿಕೆಯುಮನಿನಿಸುಂಗೆಯ್ದು ಕಣ್ಮುಚ್ಚಲೀಯಳ್||

(ಇವೆರಡುಂ ಜಾಗರಂ)

ಲಕ್ಷ್ಯಂ.

ಚಂ|| ನಡು ನಡೆಪಿತ್ತು ತನ್ನನೆನೆ ಮೆಯ್ ಬಡವಾದುದು ಲೋಚನಾಂಶುಗಳ್ |
ಬಿಡೆ ತೊಡರ್ದಂತೆ ಗಂಡಯುಗಳಂ ಬಿಳಿದಾದುವು ತೋಳ್ಗಳೊಳ್ ಪರಂ ||
ಬಡೆದವೊಲೆಯ್ದೆ ಸುಯ್ ಸತಳವಾದುದು ಭಾವರಸಪ್ರವಾಹದೊಳ್ |
ಗಡಣಿಸಿದಂತೆ ಬಾಷ್ಪಜಲಸಂತತಿ ಕಾೞ್ಪುರಮಾದುದಾಕೆಯಾ || ೨೮||

ವ|| ಮತ್ತಂ.

ಚಂ|| ಸುದತಿ ಲತಾಂಗವೇಕೆ ಬಡವಾದುದಿದೆಂದಪೆ ಮುನ್ನಮೈಕ್ಯಭಾ |
ವದೊಳಣುಭೇದಮಿಲ್ಲೆನಿಸಿ ಮತ್ಪ್ರಿಯನಿರ್ದಪೆ ದೊಡ್ಡಿತಾಗಿ ತೋ ||
ರ್ಪುದುಮೆನಗೀಗಳರ್ಥವೊಡವೋದುದು ನಲ್ಲನೊಳಿತ್ತಲರ್ಥಮಿ |
ರ್ದುದು ತನುವೊಂದನರ್ಥಿಸಿದೊಡೇಂ ಬಡವಾಗದೆ ದೊಡ್ಡಿತಕ್ಕುಮೇ|| ೨೯||

(ಇವೆರಡುಂ ಕಾರ್ಶ್ಯಂ)

ಮ|| ಗಿಳಿಗಿನ್ನುಂ ಕುಟುಕಿಕ್ಕೆನೆಂಬಳೆಲೆ ನೀನಾರೋಗಿಸೆಂದಂದು ಕೋ |
ಕಿಳಮಿನ್ನುಂ ತಳಿರ್ಗಚ್ಚದೆಂಬಳೆಲೆಯಂ ಮೆಲ್ಲೆಂದೊಡೇೞ್ ಮಜ್ಜನಂ ||
ಗೊಳಲೆಂದಂದೆಲರಿಂದೆ ಮೆಯ್ ನಡುಗಿತೆಂಬಳ್ ಚಂದನೋದ್ವರ್ತನೀ |
ಗಳದೇಕಿಲ್ಲೆನೆ ಪಾವು ಕಾವುದನೆ ಕೇಳ್ದಂಜಿರ್ದೆನೆಂಬಳ್ ಸಖೀ || ೩೦||

(ಇದು ಅರತಿ)

ಮ|| ನೆರೆವಳ್ ತಂಗಿಯನಟ್ಟಿ ತಾನೆ ಬರಲೊಲ್ಲಂ ಲಜ್ಜೆಯಿಂದೋಪನಂ ।
ಕರೆವೆಂ ವೈತಿಕವೆಂದಪಂ ಸಖಿ ಶರಣ್ಬೊಕ್ಕೆಂ ಗಡಾ ನಲ್ಲನಂ ||
ಬರಿಸೆನ್ನಲ್ಲಿಗೆ ತೋಱು ಮಲ್ಲಿಗೆ ಎಲೇ ಬೆಳ್ದಿಂಗಳೇ ನಿನ್ನನಾ ।
ನೆರೆವೆಂ ಕೋಗಿಲೆ ನಿನ್ನ ಕಾಲ್ವಿಡಿದಪೆಂ ತೆಂಗಾಳಿ ತೊಱ್ದಾತ್ತಪೆಂ || ೮೧||

(ಇದು ಲಜ್ಜಾತ್ಯಾಗಂ)

ಸೂತ್ರಂ ೪೨.

ಕಂ|| ವಿರಹೋನ್ಮಾದದೆ ಮೋಹಂ |
ಬಿರಯಿಸೆ ಮೆಯ್ಮಱೆದುದದುವೆ ಮೂರ್ಛೆಯೆನಿಕ್ಕುಂ ||
ಮರಣೋದ್ಯೋಗಂ ಮರಣಂ |
ಬರೆ ತನಗದು ಕಡೆಯವಸ್ಥೆ ಮರಣಮೆನಿಕ್ಕುಂ ||

ಲಕ್ಷ್ಯಂ.

ಮ|| ನಿಜಕೇಳೀಗೃಹದೊಳ್ ಬೆಡಂಗೆಸೆವ ಭಿತ್ತಿವ್ರಾತದೊಳ್ ಚಿತ್ರಮಂ ।
ಗಜಕುಂಭಸ್ತನೆ ನೀನೆಗೆತ್ತು ದಿಟದಿಂ ಮುದ್ದಾಡಿ ಮಾತಾಡಿ ಸ ||
ಕ್ಕಜವೇನಿತ್ತಪರೆಂದು ತೊಟ್ಟುಱೆತರುತ್ತುಂ ನೋಡಿ ತಾಂ ಕಾಣದಂ ।
ಗಜರೂಪಂ ಪೊಱುವೋಗದಂತೆ ಪಡಿಯಂ ಸಾರ್ಚಂಬಳೇಂ ಭ್ರಾಂತೆಯೋ ||

ವ|| ಮತ್ತಂ.

ಚಂ|| ತಳರದೆ ತನ್ನ ಕಣ್ಣವೊದಲೊಳ್ ಸುೞಿವಾಕೆಯ ರೂಹು ಗಂಡದ ।
ರ್ಕಳಸಿದೊಡಾಕೆಗೆತ್ತು ರಸಚಿತ್ರದ ಪೆಂಡಿರನಾಕೆಗೆತ್ತು ಪು ||
ತ್ಥಳಿಗಳನಾಕೆಗೆತ್ತೆಲಗೆ ಬಾರೆನುತುಂ ನಳಿತೋಳನೆತ್ತಿ ಕೋ ।
ಮಳಕರಕಂಜದಿಂದೆಱೆವಿ ನೋಡಿದನಾರತಿರಾಗದೋಹಳೆಂ || ೮೩||

ಇವೆರಡುಂ ಮೋಹಂ (ಮೋಹೋನ್ಮಾದಂ)

ಮ|ಸ್ರ|| ಅಲರ್ಗಣ್ಣಿಂ ಪೂವಿನಂಬಂ ಸಮೆದನೊ ಮದನಂ ಕೊಂಡು ಮೇಣ್ ಪ್ರಾಣಮಂ ಕೋ ।
ಗಿಳೆಯೆಲ್ಲಂ ಕೂಡಿ ಕೈಕೊಂಡುವೊ ಕಳರವಮಂ ವಕ್ತ್ರಚಂದ್ರಾಂಶುವಂ ಪೆ||
ಣ್ಗೊಲಗೆಯ್ದುಂ ಚಂದ್ರಮಂ ಕೊಂಡನೊ ಖಿಲನುಳಿದಂತೇಕೆ ಪಣ್ನೋಡ ಳೋರಂ ।
ತೆಲಗೇ ಮಾತಾಡಳೇಕೆಮ್ಮಯ ಸಖಿ ಮುಖದಿಂ ಹಾಸಮಂ ಸೂಸಳೆಮ್ಮೊಳ್||

ವ|| ಮತ್ತಂ.

ಚಂ|| ನಸುಬಿಸುಪೇಱೆ ಮೆಯ್ ಮಗುೞೆ ಕೆತ್ತುವ ತಾಣಮೆ ಕೆತ್ತೆ ಮಂದಮಾ।
ದುಸಿರ್ಗಳೆ ನಾಸಿಕಾಮುಕುಳದಿಂದೆನಸುಂ ಪೊಱಪೊಣ್ಮೆ ತಳ್ತು ಸಂ ||
ಧಿಸಿದೆವೆ ಬಿರ್ಚೆ ಕಣ್ಮಲರ್ಗಳುಳ್ಳಲರುತ್ತಿರೆ ಜಾನಕೀ ಎನು ॥
ತ್ತುಸಿರ್ದನಿಸಿರ್ದನಾರಘುಕುಲಾಂಬರಚಂಡಮರೀಚಿ ಮೂರ್ಛೆಯೊಳ್ ||
(ಇವೆರಡುಂ ಮೂರ್ಛಾವಸ್ಥೆ)

ಕಂ|| ನಾರಿಯ ಕೊರಲ್ಗೆ ನೀಂ ಮಣಿ।
ಹಾರಂಬೊಲ್ ಮೆಱೆವುತಿರ್ದೆ ನೀಂ ತೊಲಗಿರೆ ತ ||
ನ್ನಾರಿಯ ಕೊರಲ್ಗೆ ತಾಂ ಮಣಿ।
ಹಾರಂಬೋಲ್ ನಿಂದುದಾಕೆಯಸು ವಸುಧೇಶಾ || ೮೬||
(ಇದು ಮರಣಂ)

ವ|| ಇದಂ **ರಣರಣಕ**ಮೆಂಬರೆಬರ್

ಮ|| ಮೊಗಮಂ ಚುಂಬಿಸಿ ಮುದ್ದುಗೆಯ್ದು ತೊಲಗಲ್ವೇಡೆಂದು ವಸ್ತ್ರಾಂಚಲಂ।
ಬಿಗಿದಳ್ ಬಾಗಿಲೊಳಡ್ಡವಿಟ್ಟು ಕರುಣಂ ಬರ್ಪಂತೆ ಸಾರ್ದಪ್ಪಿದಳ್ ॥
ಮೊಗಮಂ ನೋಡದೆ ಪೋಪೆ ಪಾಪಿಯೆನುತುಂ ಕಣ್ಣೀರ್ಗಳಂ ತುಂಬಿದಳ್।
ಮೃಗಶಾಬೇಕ್ಷಣೆ ಮುನ್ನೆ ಬಿಟ್ಟಳಸುವಂ ಬಿಟ್ಟಳ್ ಬೞಿಕ್ಕೋಪನಂ || ೮೭॥
(ಇದು ರಣರಣಕಂ)

ಸೂತ್ರಂ ೪೩.

*ಕಂ|| ಇಂತಿದುವೆ ವಿಪ್ರಲಂಭಮು।
ನಾಲ್ಕಿಸಿಯುರವಸ್ಥೆಗಳ್ ಮತಾಂತರದಿಂ ಮು ||
ತ್ತಂತೆ ಗುಣಕೀರ್ತನಂ ಸಲೆ।
ಸಂತಾಪಂ ಗಮನಮೆಂಬವಸ್ಥರ್ಥಂಗಳ್ ||

ಚಂ|| ಮದನನ ಕೆಯ್ದುವೆಲ್ಲಿದನನಂಗನ ಕೈಪಿಡಿಯೆಲ್ಲಿದಂ ವಿಳಾ।
ಸದ ಮೊದಲೆಲ್ಲಿದಂ ಸೊಬಗಿನಾಗರವೆಲ್ಲಿದನೆಲ್ಲಿದಂ ವಿನೋ ||
ದದ ಕಣಿಯೆಲ್ಲಿದಂ ಚದುರಗೊಟ್ಟಿಗನೆಲ್ಲಿದನಿಚ್ಛೆಯಾಣ್ಮನೆ।
ಲ್ಲಿದ ನೆರ್ದೆಗಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ || ೮೮||
(ಇದು ಗುಣಕೀರ್ತನಂ)

* ಇದು ಕವಿಕಾಮನ (ಶೃಂಗಾರ ರತ್ನಾಕರದ) ಮತವು.

ಉ|| ಪಾಸುವ ಪಲ್ಲವಾಸ್ತರಣಮೊಟ್ಟುವ ಬಾಲಮೃಣಾಳಸಂಕುಲಂ |
ಸೂಸುವ ಚಂದ್ರಕಾಂತಜಲಮೊತ್ತುವ ಶೀತಳಿಕಾಕದಂಬಕಂ ||
ಬೀಸುವ ಪುಷ್ಪವೀಜನಮುದಿರ್ಚುವ ಕಪ್ಪುರವಚ್ಛವಾಗಳುಂ |
ಪೂಸುವ ಚಂದನಂ ಬಿಸುಪನಾರಿಸಲಾಱವು ಸತ್ಯಭಾಮೆಯಾ || ೮೯||

ವ|| ಮತ್ತಂ.

ಸ್ರ|| ಚಿತ್ತಂಬೊಕ್ಕಿರ್ದಯೆಂತೈ ಹರಿ ಕುಳಿರ್ವ ಕರಸ್ಪರ್ಶದಿಂದಿಂದು ತಾಪಂ |
ಬೆತ್ತಂ ಮೆಯ್ ಸೋಂಕೆ ಮಂದಾನಿಲನುರಿವನದರ್ಕಾಳಿಯರ್ ದೂರದಿಂ ಸೂ||
ಸುತ್ತಿರ್ಪರ್ ತೋಯಮಂ ಜೀರ್ಕೊಳವಿಯೊಳೆ ಮನೋಜಾತನಾದಾರ್ದಿ
[ಸಲ್ಕಾ |
ರ್ದತ್ತುಂಗೋಲಿಕ್ಕುವಂ ಬಣ್ಣಿಸುವೊಡಳವೆ ಸತ್ರಾಜಿತೀದೇಹದಾಹಂ || ೯೦||
(ಇವೆರಡುಂ ಸಂತಾಪಂ)

ಕಂ|| ಕಡುಗಟ್ಟಿಲೆಯೊಳ್ ಪ್ರಿಯನಿ |
ರ್ದೆಡೆಗಾಗಿಯೆ ಪೋಗಲೆಂದು ಮನೆಯಂ ಪೊಱಮ ||
ಟ್ಟಡಿಯಿಡಲಣ್ಮದೆ ಮಱುಗುವ |
ಮಡದಿಗೆ ಬಗೆ ತೀಱಿ ಮಿಂಚು ಮಿಂಚಿದುದಾಗಳ್ || ೯೧||

ವ|| ಮತ್ತಂ.

ಕಂ|| ಕಳವಳಿಸಿದಪಳ್ ಬಾಯಱಿ |
ದಳಱಿದಪಳ್ ಬೀದಿಬೀದಿಯೊಳೆ ನಿನ್ನಂ ಕೋ ||
ಮಳೆ ಪಿಡಿಯಲೆಂದು ಪಾರ್ದ |
ವ್ವಳಿಸಿದಪಳ್ ಸೇನೆಯುವಳ್ಗೆ ಕರುಣಿಸಲಾಗಾ || ೯೨||
(ಇವೆರಡುಂ ಗಮನಂ)

ಕಂ|| ಪರಿಣಾಮುವನಂತಂ ವ್ಯವ |
ಹರಿಸುವುದವಱವಱವಸ್ಥೆ ನೆಗಳ್ದುವನಂತಂ ||
ಪರಿಭಾವಿಸುವೊಡೆ ರಸವಿ |
ಸ್ತರಮಂ ವಿವರಿಸುವೆನೆಂಬನಾವನುಮೊಳನೇ || ೯೩||

ವ|| ಈ ಯವಸ್ಥೆಗಳ್ ಸ್ತ್ರೀಯರೊಳೆಯಪ್ಪುವೆನವೇಡ, ಉಚಿತವಿಧಿಯಿಂ ಪುರುಷರೊಳಮಪ್ಪುವು. ವಾಗ್ವೃತ್ತಿಶೃಂಗಾರಮೆಂದೊಡನುಭಾವಂ, ವಸ್ತ್ರಭೂಷಣ ಗಂಧಮಾಲ್ಯಾನುಲೇಪನರೂಪನೇಪಥ್ಯ ಶೃಂಗಾರಮೆಂದೊಡುದ್ದೀಪನವಿಭಾವಂ, ಕ್ರಿಯಾತ್ಮಕಶೃಂಗಾರಮೆಂದೊಡದುವುಮನುಭಾವಂ. ಸಂಕೀರ್ಣಶೃಂಗಾರಮೆಂದೊಡದು ವಿಭಾವಾನುಭಾವಂಗಳ ನೆರವಿ, ವ್ಯಸ್ತಶೃಗಾರಮೆಂದೊಡದು ರಸಸಂಕರಂ, ವಿಭಾವಾನುಭಾವಂಗಳನೆ ಯೀಪೆಸಱಿಂದೆಂದೊಡದುವುಂ ತಾವನಂತಕಂಗಳಿನಿತಱಿಂ ನೆಱೆಯುವು. ಅಲ್ಲಿವಿಭಾವಾದಿಗಳ್ ಆರಸಪೋಷಕಂಗಳಲ್ಲದೆ ತಾವೆ ರಸಂಗಳಲ್ತು. ಮಿಕ್ಕರಸಂಗಳ್ ವಾಗ್ರೂಪಕ್ರಿಯಾತ್ಮಕಮೆಂದು ಮೂಱುಂದೆಱನೆಂದೊಡವು ವಿಭಾವಾನುಭಾವಂಗಳಲ್ಲದೆ ಪಿಂತೆ ಪೇೞ್ದಾಚಾರ್ಯರಾರುಮಿಂತೆ ನಿರೂಪಿಸಿದುದಿಲ್ಲಂ. ಅದಱಿಂ ವಿದ್ವಜ್ಜನಂಗಳ್, ಈ ಮಾಱ್ಕೆಯಿಂ ಪೇೞೆಂದು ಬೆಸಸಲೊಡಮಿಂತೊಡರ್ಚಿದೆಂ.

## ಗದ್ಯ

ಇದು

ಶತೇಂದ್ರ ಮುನೀಂದ್ರವಂದಿತಾರ್ಹತ್ಪರಮೇಶ್ವರ

ಪಾದಾರವಿಂದಾ ಮಂದಮಕರಂದಾನಂದಿತ

ಭೃಂಗಾಯಮಾಣ

"ಕ ವಿ ಸಾ ಳ್ವ"

ವಿರಚಿತಮಪ್ಪ

† ರ ಸ ರ ತ್ನಾ ಕ ರ ದೊ ಳ್

ಶೃಂಗಾರಪ್ರಪಂಚಂ

ಪ್ರಥಮ ಪ್ರಕರಣಂ

* ಈ ಭಾಗದಲ್ಲಿ ಕವಿಕಾಮನ (ಶೃಂಗಾರರತ್ನಾಕರದ) ಮತವನ್ನು ಖಂಡಿಸಿರುವನು.—

† ಶೃಂಗಾರರಸರತ್ನಾಕರದೊಳ್ ಪ್ರಥಮಾಶ್ವಾಸಂ. (ಎಂದು ಕೆಲವು ಪ್ರತಿಗಳಲ್ಲಿದೆ)

ಶ್ರೀ

# ನವರಸ ಪ್ರಪಂಚಂ.

## ದ್ವಿ ತೀ ಯ ಪ್ರ ಕ ರ ಣ ಂ

---

ಸೂತ್ರಂ ೪೪.

ಕಂ|| ಮಿಗೆ ಹಾಸಮೆ ಹಾಸ್ಯರಸಂ ।
ನೆಗೞ್ಗಂ ಪರಿಹಾಸಕಾದಿಯಾಲಂಬನಮು ||
ಪೊರ್ಗೆದವರ ವಿಕೃತವೇಷಾ ।
ದಿಗಳುದ್ದೀಪನವಿಭಾವಮಪ್ಪುದೆಂದಿಪ್ಪರ್ ||

ಸೂತ್ರಂ ೪೫.

ಕಂ|| ಅನುಭಾವಂ ತಿಳಿವೊಡದ ।
ರ್ಕನುಭಾವಕರಕ್ಷಿವಿಕಸನಾದಿ ವಿವರ್ಣ ||
ಸ್ವನಾದಿ ಸಾತ್ವಿಕಭಾವಂ ।
ಘನಮತಿಹರ್ಷಾದಿ ನೆಗೞ್ದ ಸಂಚಾರಿ ವಲಂ ||

ವೃ|| ಪರಿಹಾಸಕದೇಶಕಾಲವಯೋವರ್ಣವಿಪರೀತಾದಿಯಾಲಂಬನವಿಭಾವಂ, ಪರಿಹಾಸಕಾದಿಗಳ ಕೇಶಬಂಧನಮುಸಭೂಷಣಪ್ರಲಾಪನರ್ತನಮನ್ಯಗತ್ಯಾದ್ಯನುಕರಣವಿವಾದಿಯಾಗಿ ಯುದ್ದೀಪನವಿಭಾವಂ, ನಾಸೌಷ್ಠಕಪೋಲಸ್ಪಂದನದೃಷ್ಟಿವ್ಯಾಕೋಚನಾಕುಂಚನಮುಖರಾಗಪಾರ್ಶ್ವಗ್ರಹಣಾದಿ ಯನುಭಾವಂ, ಸ್ವೇದಾಶ್ರುವಿವರ್ಣಸ್ವರಭೇದಾದಿ ಸಾತ್ವಿಕಭಾವಂ, ನಿದ್ರಾವಹಿತ್ಥತಂದ್ರೀತ್ರಪಾಲಸ್ಯಾದಿ ವ್ಯಭಿಚಾರಿಭಾವಂ, ಇವಱಿಂ **ಹಾಸ್ಯಸ್ಥಾಯಿ ಸ್ವಾದ್ಯಮಾನಮಾಗೆ ಹಾಸ್ಯರಸಂ**.—

ಸೂತ್ರಂ. ೪೬.

ಕಂ|| ಕ್ರಮದಿಂದನುಭಾವಮದು ।
ತ್ತಮಮಧ್ಯಮಯುತ ಜಘನ್ಯದಿಂ ಮೂಡೆಱನು ||
ತ್ತಮಮಿರ್ತೆಱಂ ಸ್ಮಿತಂ ಹಸಿ ।
ತಮೆಂದು ಚತುರಾದ ಹಾಸ್ಯರಸಕಱಿವವರಿಂ ||

ಸೂತ್ರಂ. ೪೭.

ಕಂ|| ಕೃತಗಂಡವಿಕಾಸಂ ತಾಂ ।
ಸ್ಮಿತಂ ಮುಗುಳ್ನಗೆಯನುಳ್ಳುದು ಹಸಿತಂ ರಾ ||
ಜಿತವಿಹಸಿತಮುಪಹಸಿತ ।
ದ್ವಿತಯಂ ಮಧ್ಯಮಮೆನಿಪ್ಪ ಪೆಸರನುಭಾವಂ ||

ಸೂತ್ರಂ. ೪೮.

ಕಂ|| ಮೃದುರವಮೆ ವಿಹಸಿತಂ ಕೊರ ।
ಲದಿರ್ಪುದೆಯುಪಹಸಿತಮುರುತರಂಕಂಪಾಶ್ರು ||
ಪ್ರದಮವಹಸಿತಂ ತನು ಚಲಿ ।
ಪುದುಮತಿಹಸಿತಂ ಜಘನ್ಯಮೀಪೇಳ್ದೆರಡುಂ ||

ಲಕ್ಷ್ಯಂ.

ಶಾ|| ಶ್ರೀ ತನ್ನಂದದ ರೂಪು ಕೌಸ್ತುಭದೊಳಚ್ಚೊತ್ತಿರ್ದಪ್ಪೋಲ್ ತೋರ್ಪಿ ಕಂ।
ಡೇತರ್ಕೀಕೆ ಮದೀಯವಾಸದೆಡೆಗೈತಂದಿರ್ಪ ಳಂದೀಕ್ಷ್ಯೆಯಿಂ॥
ದಾತಾಮ್ರಾಕ್ಷಿ ನಿರೀಕ್ಷಿಸುತ್ತುಮಿರೆ ತನ್ಮುಗ್ಧತ್ವಮುಂ ಕಂಡು ಸಂ ।
ಜಾತಾಂತಸ್ಸ್ಮಿತನಾದ ಕೃಷ್ಣನೆಮಗೀಗಾನಂದಸಂದೋಹಮಂ || ೧೪||
(ಇದು ಸ್ಮಿತಂ)

ಕಂ|| ಚದುರನ ಜಾಣ್ನುಡಿಗಿನಿಯಳ್ ।
ಮುದಮಂ ತಳೆದಿಂಪನೀವ ನಸುನಗೆಗುಡೆ ಪೋ ||
ಲ್ತುದು ಚೆಲ್ವಿಂ ಬಾಯ್ ದಾಳಿಂ ।
ಬದ ಪಣ್ ಅರಬಿರಿದು ಬಿತ್ತು ತೋರ್ಪುವ ತೆರದಿಂ || ೧೫||
(ಇದು ಹಸಿತಂ)

ಕಂ|| ಗಾವಿಲನುರ್ಚಿ ಬಿಣ್ಪೊಡೆಪು ।
ತ್ತಾವಘುವಂ ನೋಡುತಲ್ಲಿ ಬೆಳ್ಳಾಗಿರ ಕಂ ||
ಡಾವಧು ನಗೆ ನಗುವಂತಾ ।
ಯ್ತಾವೀಣಾಮಧುರನಾದಮಂ ಮೃದುನಾದಂ || ೧೬||
(ಇದು ವಿಹಸಿತಂ)

ಕಂ|| ಬಿಂಗಿಯ ಕುಣಿತಮನೀಕ್ಷಿಸಿ ।
ಯಂಗನೆ ನಗೆಯುಗುಳ್ವ ತಚ್ಛಿರಃಕಂಪದ ಕಂ ||
ಪಿಂಗೆಳಸಿ ಮುಡಿಗೆ ಮುಸುಱಿದ ।
ಭೃಂಗಂಗಳ್ ನೆಗೆದ ಪೀಲಿಗೊಡೆಯೆನೆ ತೋರ್ಕುಂ || ೯೭||

(ಇದು ಉಪಹಸಿತಂ)

ಮ|| ಕಿವಿಯಂ ಮಂಟಿಸಿ ಮಂಟವಲ್ಲಿ ಱಿದು ಕಣ್ಣಂ ಬಿಟ್ಟು ವಕ್ತ್ರಾಂಗಿ ರಾ |
ಜವಿನೋದಂ ಬಿಱುನಕ್ಕುನಕ್ಕು ಕುಕಿಲುತ್ತುಂ ಜರ್ಗನಾಡುತ್ತೆ ತೋ ||
ರ್ಪ ವಿಕಾರಂ ಸಭೆಗಾಗಳೇಂ ಪಡೆದುದೋ ವಕ್ತ್ರಪ್ರಕಾಶೋದಿತಾ |
ರವಮಂ ಕಂಠದೆ ಕಂಪನಾಶ್ರುಜಲಮಂ ವಿದ್ವಜ್ಜನಾಘಾನಾ || ೯೮||

(ಇದು ಅಪಹಸಿತಂ)

ಕಂ|| ಕುಳ್ಳಿದ್ದು ಮಿಳಿರ್ವ ಮೆಳೆಯೊಳ್ ।
ಪಳ್ಳದ ಕೇದಗೆಗೆ ಪಾಯ್ದು ಪತ್ತಿದ ಕೆಯ್ಯಂ ||
ಮುಳ್ಳುರ್ಚೆ ತೆಱೆದು ಪಲ್ಲಂ ।
ಘೊಳ್ಳೆನೆ ನಗಿಸಿದುದು ಕಟಕಮಂ ಮರ್ಕಟಕಂ || ೯೯||

(ಇದು ಅತಿಹಸಿತಂ)

ಸೂತ್ರಂ ೪೯.

ಕಂ|| ಇಂತಾದನುಭಾವಂ ದ್ವಿವಿ ।
ಧಂ ತನ್ನಿರಪಿಂಗೆ ತಾನೆ ನಗೆ ಪೆಱರಂ ಕಂ ||
ಡಂತು ನಗೆ ಮಾರ್ಗದಿಂ ಪೆಸ ।
ರಂತಾತ್ಮಸ್ಥಂ ಪರಸ್ಥ ಮೆಂದಿರ್ತೆಱದಿಂ ||

ಲಕ್ಷ್ಯಂ.

ಕಂ|| ತೊಟ್ಟಹಿಯುಸಿಟ್ಟು ಬೂದಿಯ ।
ನುಟ್ಟ ಜಿನವನೀಶನೆಯ್ದೆ ತನ್ನಿರವಂ ತಾಂ ||
ದಿಟ್ಟಿಸಿ ಮನದೊಳೆ ನಕ್ಕಂ ।
ಬೆಟ್ಟದ ಮಗಳಕ್ಷಿಗಿಸಿದಸೀಗುಮೆನುತ್ತುಂ || ೧೦೦||

ವ। ಇದು ಆತ್ಮಸ್ಥಂ, ಪಿಂತೆ ಪೇೞ್ದುವು ಪರಸ್ಥಂ, ಇಂತು ಹಾಸ್ಯರಸಂ ಪನ್ನೆರ
ಡಱಿತೆಱಂ.

ಸೂತ್ರಂ ೫೦.

ಕಂ॥ **ಕರುಣಂ ಶೋಕದಿನಕ್ಕುಂ ।**
ಮರಣಂ ಗತನಾದ ಬಂಧುವಾಲಂಬನವಿ ॥
ನ್ನುರುಬಂಧ್ವಾಕ್ರಂದನಮುಖ ।
ಭರದುದ್ದೀಪನವಿಭಾವಮಾ ರಸಕಕ್ಕುಂ ॥

ಸೂತ್ರಂ ೫೧.

ಕಂ॥ ರುದಿತ ವಿಲಾಪಕ್ಲೇಶಾ ।
ದಿ ಪಲಾಯನುಭಾವಂ ವಿವರ್ಣವಶ್ರುಸ್ತಂಭಾ ॥
ದಿ ದಲಂಸಾತ್ವಿಕಮಾಲ ।
ಸ್ಯದೀನತೆಯೋನ್ಮಾದಮಾದಿ ಸಂಚಾರಿಯು ತಾಂ ॥

ವೃತ್ತಿ॥ ಇಷ್ಟವಿಯೋಗಾನಿಷ್ಟಸಂಯೋಗಾದ್ಯಾಲಂಬನವಿಭಾವಂ, ಬಂಧುಗಳಳಿಕ್ಕೆ ಮೊದಲಾದುವುದ್ದೀಪನ ವಿಭಾವಂ, ದೈವೋಪಾಲಂಭನಿಶ್ವಾಸತನುತ್ವಮುಖಶೋಷಣಭೂಲುಠನಮೂರ್ಛಾದಿಯನುಭಾವಂ, ಸ್ವರಭೇದಾಶ್ರುಸ್ತಂಭವಿವರ್ಣಕಂಪಪ್ರಳಯಾದಿ ಸಾತ್ವಿಕಭಾವಂ, ದುಃಖಾಮುಯುನಿರ್ವೇದಗ್ಲಾನಿಶಂಕಾತ್ಸುಕ್ಯಮೋಹಶ್ರಮತ್ರಾಸ ವಿಷಾದದೈನ್ಯಾಮಯಜಡತೋನ್ಮಾದಾಪಸ್ಮಾರಾಲಸ್ಯಮರಣಪ್ರಭೃತಿ ವ್ಯಭಿಚಾರಿಭಾವಂ,ಇವಱಿಂ **ಶೋಕ**ಸ್ಥಾಯಿ ಚರ್ವ್ಯಮಾಣಮಾಗೆ **ಕರುಣ**ರಸಂ.

ಲಕ್ಷ್ಯಂ.

ಮ॥ ದೆಸೆಗಳ್ ಮಾರ್ದನಿವೋಗೆ ಕೇಳ್ದರೆರ್ದೆ ಬಾಳಂ ಬೀಸಿದಂತಾಗೆ ತೆ ।
ಳ್ವಸಿರಂ ತೊಪ್ಪನೆ ಮೋದಿ ಬಾಯ್ವಿಡಿದು ಹಾ ಎಂದಳ್ತು ಬಾಷ್ಪಾಂಬು ಪೂ॥
ರಿಸೆ ಪುಯ್ಯಲ್ಚುವ ಸೀತೆಯಂ ಹಹಹ ನಿಸ್ತ್ರಿಂಶಂ ದಶಾಸ್ಯಂ ವಿಗು ।
ರ್ವಿಸಿ ನೋಡುತ್ತುಮದೆಂತು ನಿಷ್ಕರುಣದಿಂದುಯ್ಯಲ್ ಮನಂದಂದನೋ ॥

ಚಂ॥ ಬಳಯಿಸೆ ಬಾಸುಱಿಂ ಬಸಿಱಿನೊಳೆಯ್ದೆ ಕರಾಂಗುಲಿಗಳ್ ಕಪೋಲದೊಳ್ ।
ಬಳಯಿಸೆ ಬಾನಲಂ ಸುರಿವ ಬಾಷ್ಪಜಲಂ ಕರುಣೋತ್ಥಹಾರವಂ ॥
ಬಳಯಿಸೆ ಬಾಯ ಬತ್ತುಗೆಯನಿಂತೆರ್ದೆಗೆಟ್ಟಳುತುಂ ಮೃಣಾಳಕೋ ।
ಮಳತನು ಬಿಳ್ದಳಂದಜಿತಸೇನ ನೃಪಾಲಪದಾಬ್ಜಮೂಲದೊಳ್ ॥ ೨೦೨॥

ಉ|| ಊಡಿದೆನೋದಲಿತ್ತೆನೊಡಗಲ್ವುದುಮುಂಣ್ಣನ ಕೂಸುದಂದೆನಾಂ ।
ಬೇಡೆನೆ ವೂಱಿ ಕಳ್ಳರೊಡನಾಡಿದೆ ಪೆತ್ತ ಬಸಿರ್ಗೆ ಸಂತಸಂ ||
ಮಾಡಿದೆ ಯಿಂದಿದೋ ಮಗನೆ ಸುಣ್ಣನೆ ನುಣ್ಕೊಗದಲ್ಲಿ ವೂಸೆಗಳ್ ।
ಮೂಡದ ಮುನ್ನ ಸಿನ್ನ ಪೆಗಲೊಳ್ ಪೊಸಸೂಲವಿದೇಕೆ ಮೂಡಿತೋ ||
(ಇವು ಮೂಱುಂ ಕರುಣರಸಂ)

ಸೂತ್ರಂ ೫೨.

ಕಂ|| ಪ್ರಭವಿಪ್ಪುದುತ್ಸಾಹಸ್ಥಾ ।
ಯಿ ಭಾವದಿಂ ವೀರರಸಮೆ ಮೂಱುದೆಱನಕ್ಕುಂ ||
ಅಭಿಗತದಾನಾದಿ ದಯಾ ।
ಪ್ರಭಾವದಿಂ ಸುಕವಿಸಿಕರಮಾರ್ಗಕ್ರಮದೊಳ್ ||

ಸೂತ್ರಂ ೫೩.

ನುತಪಾತ್ರ ಶತ್ರು ದೀನರ್ ।
ವಿತತಾಳಂಬನವಿಭಾವಮಕ್ಕುಂ ದಾನ ||
ಸ್ತುತಿ ರಣಭೇರೀಧ್ವನಿ ದೀ ।
ನತೋಕ್ತಿಯುದ್ದೀಪನಂ ವಿಭಾವಮದಕ್ಕುಂ ||

ಸೂತ್ರಂ ೫೪.

ಕಂ|| ವಸುಶಸ್ತ್ರಸಂಗ್ರಹತ್ವಂ ।
ಪ್ರಸಾದಮನುಭಾವಮೆಸೆವ ಪುಳಕಾದಿಯೆ ಭಾ ||
ವಿಸೆ ಸಾತ್ವಿಕಭಾವಂ ಹ ।
ರ್ಷಸೋಗ್ರಧೃತ್ಯಾದಿ ಸೆಗಳ್ದ ಸಂಚಾರಿ ವಲಂ ||

ವೃತ್ತಿ|| ಪಾತ್ರಪ್ರತಿನಾಯಕದೀನಾದಿಯಾಲಂಬನವಿಭಾವಂ; ದಾನಸ್ತೋತ್ರ ಫಲವ್ಯಾವರ್ಣನತತ್ಪಾತ್ರವ್ರತಶೀಲಾದಿಗುಣಾದಿಯುಂ, ರಣಭೇರೀಧ್ವನಿತದ್ರಿಪುನಯನವಿವೇಕಬಲಶಕ್ತಿಪ್ರಧಾನಪ್ರಭಾವಪ್ರತಾಪವಿಕ್ರಮಾಧಿಕ್ಷೇಪಾದಿಯುಂ, ದೀನತೋಕ್ತ್ಯಾದಿಯುಮುದ್ದೀಪನವಿಭಾವಂ; ಕ್ರಮದಿಂ ವಿತ್ತಸಂಗ್ರಹತ್ವತ್ರಿಕರಣಶುದ್ಧತ್ವ ವಿವೇಕತ್ಯಾಗಾದಿಯುಂ ಶಸ್ತ್ರಸಾಮಗ್ರೀಪರೀವಾಲಂಕಾರಸ್ಥೈರ್ಯಧೈರ್ಯಗಾಂಭೀರ್ಯವಿಶಾರದತ್ವಾದಿಯುಂ, ಕೃಪಾಭಯವಚನಪ್ರಸಾದಾದಿಯುಮನುಭಾವಂ; ಅಶ್ರುಪುಲಕಾದಿಯೆ ಸಾತ್ವಿಕಭಾವಂ; ಹರ್ಷ

ಮತಿಶ್ರುತಗರ್ವಾಮರ್ಷೋಗ್ರಧೃತ್ಯಾದಿಗಳ್ ವ್ಯಭಿಚಾರಿಭಾವಂ, ಇವಱಿ ಸುತ್ಸಾಹಸ್ಥಾಯಿಭಾವಂ ಚರ್ವ್ಯಮಾಣಮಾಗೆ ವೀರರಸಂ.

ಲಕ್ಷ್ಯಂ.

ಮ॥ ಉದಯಾಸ್ತೋನ್ನತಶೈಲಸೇತುಹಿಮವತ್ಕತ್ಕೀಲಪರ್ಯಂತಸಂ |
ಪದೆಯಂ ವಾರ್ಧಿತರತ್ತರಂಗನಿನದತ್ಕಾಂಚೀಕಲಾಪಾಂಚಿತಾ ||
ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿ |
ರ್ಚಿದ ಗೆಲ್ಲಂ ಭುವನೈಕರಾಮನುಹಿಪಂಗಕ್ಕುಂ ಪೆಱರ್ಗಕ್ಕುಮೇ || ೧೦೪॥
(ಇದು ದಾನವೀರಂ)

ಮ॥ ಘನದೋರ್ದರ್ಪನಜೇಯನುಗ್ರತರನಾನಾಸೈನ್ಯಸಂಸೇವ್ಯನೆ |
ತ್ತಿ ನರೇಶಂ ತವೆ ಮುತ್ತೆ ಶತ್ರುಪುರಮಂ ತತ್ಕಾಂತೆಯರ್ ಘೊಳ್ಳೆನು ||
ತ್ತೆನಸುಂ ಬಂದೆರಡೋಲೆಯನ್ನು ಕಿವಿಯೊಳ್ ತಟ್ಟಿರ್ಪುದಂ ಮಾಡಿಪ್ಪುದೆಂ
ದೆನೆ ಕಾರುಣ್ಯದೆ ಕಾಯ್ದನಂತನಿಬರಂ ತದ್ದೇಶಮಂ ಕೋಶಮಂ || ೧೦೫॥
(ಇದು ದಯಾವೀರಂ)

ಚಂ॥ ಕ್ಷಿತಿಯೊಳರಾತಿಭೂಪತಿಗಳಂ ತವೆ ಕೊಂದು ಸಮಂತು ವಿಪ್ರಸಂ |
ತತಿಗಖಿಳಾವನೀತಳಮನಿತ್ತು ನೆಗಳ್ದಿದನಲ್ತೆ ವಿಕ್ರಮೋ ||
ನ್ನತಿಯನದೊಂದುದಾನಗುಣದುನ್ನತಿಯಂ ಭುವನಕ್ಕೆ ಭಸ್ಮಸಾ |
ತ್ಕೃತಖಿಪು ಪಾತ್ರಸಾತ್ಕೃತಜಗದ್ವಳಯಂ ಜಮದಗ್ನಿನಂದನಂ ॥ ೧೦೬॥
(ಇದು ಉಭಯವೀರಂ) *

ಸೂತ್ರಂ ೫೫.

(1) ಕಂ॥ ಪೊರೆಗುಂ ಕ್ರೋಧದೆ ರೌದ್ರಂ |
ಸ್ಫುರದಾಲಂಬನಮ ಮತ್ಸರದ್ವೇಷಂ ನಿ ||
ಷ್ಠುರವಚನಚೇಷ್ಟೆಗಳ್ ತಾ |
ವಿರದುದ್ದೀಪನವಿಭಾವಮಾರಸಕಕ್ಕುಂ ||

---

* ದಾನವೀರ, ದಯಾವೀರ, ಉಭಯವೀರ, ವೆಂದು ಲಕ್ಷ್ಯವು ಮೂರು ವಿಧವಾಗಿರುವುದ ರಿಂದ ಲಕ್ಷಣದಲ್ಲಿಯೂ (ಸೂ. ೫೨)... ದಾನಂ ದಯೆ | ಯುಭಯದಿನಾ...|| ಎಂದಿರಬಹುದು,

(1) ಈ ಸೂತ್ರವೃತ್ತಿಗಳಿಗೆ ಬದಲಾಗಿ ಬೇರೊಂದು ಸೂತ್ರ ವೃತ್ತಿಗಳು ಒಂದು ಪ್ರತಿ ಯುಲ್ಲಿ ಮಾತ್ರವಿವೆ. ಅವನ್ನು ಪಾಠಾಂತರವಾಗಿ ಪರಿಶಿಷ್ಟದಲ್ಲಿ ಕೊಟ್ಟಿದೆ.

ಸೂತ್ರಂ ೫೬.

ಭ್ರುಕುಟಿ ನಯನಾರುಣಾದಿ ।
ಪ್ರಕಟನಮನುಭಾವಮಾವಿವರ್ಣಸ್ವೇದಾ ॥
ದಿಕಮಕ್ಕುಂ ಸಾತ್ವಿಕವಿೞ ।
ಷೈರ್ಕೋಪಮುಗ್ರಾದಿ ನೆಗಲ್ದ ಸಂಚಾರಿವಲಂ ॥

ವೃತ್ತಿ॥ ಮಾತ್ಸರ್ಯದ್ವೇಷಮೆಂದಿರ್ತೆಱದಿಮಾಲಂಬನ ವಿಭಾವಂ, ದಾರಾಪಹಾರದೇಶ ಚಾರ್ತ್ಯಾಭಿಜನಕರ್ಮನಿಂದಾಸತ್ಯವಚನಸತ್ಯಾಧಿಕ್ಷೇಪೋಪಹಾಸಸತ್ಪಾರ್ಶ್ವ ದ್ರೋಹಂಗಳ್ ಉದ್ದೀಪನ ವಿಭಾವಂಗಳ್, ಭ್ರುಕುಟಿನಯನರಾಗದಂತಾಷ್ಠಪೀಡನಗಂಡಸ್ಫುರಣಹಸ್ತಾಗ್ರ ನಿಷ್ಪೇಷಣತಾಡನಪಾತನಪೀಡನಪ್ರಹರಣಾಪಹರಣಶಸ್ತ್ರಸಂಪಾತರುಧಿರಾಕರ್ಷಣಚ್ಛೇದನಾದಿಯನುಭಾವಂ,ಉಗ್ರಾವೇಗೋನ್ಮಾದವಿಬೋಧಾಮರ್ಷಚಾಪಲ್ಯಾದಿ ವ್ಯಭಿಚಾರಿಭಾವಂ, ಇವಱಿಂ **ಕ್ರೋಧಂ** ಚರ್ವ್ಯಮಾಣಮಾಗೆ ರೌದ್ರರಸಂ.

ಲಕ್ಷ್ಯಂ.

ಮ॥ಸ್ರ॥ಕುಡಿವೆಂ ದುಶ್ಶಾಸನೋರಸ್ಸ್ಥಳಮನಗಲೆ ಪೋೞ್ದುರ್ಕೆ ನೆತ್ತರಂ ಪೋ।
ಗುಡಿವೆಂ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ ನುಚ್ಚುನೂಱಾ ॥
ಗೊಡೆವೆಂ ತದ್ರತ್ನರಶ್ಮಿಪ್ರಕಟಮಕುಟಮಂ ನಂಬು ನಂಬೆನ್ನ ಕಣ್ಣಿಂ ।
ಕಿಡಿಯುಂ ಕೆಂಡಂಗಳುಂ ಸೂಸಿಸಪ್ಪುವಸಿತುಮಂ ನಂಬು ಪಂಕೇಜವಕ್ತ್ರೇ ॥

([illegible] ತ್ಸ [illegible] ಪ್ರಂ)

ಮ॥ಸ್ರ॥ ಸ್ಫುಟಕೋಪಾಟೋಪನೇತ್ರಸ್ಫುರದರುಣತರತ್ತ್ವಪಿಸ್ತ್ರಾನನಾ ಸಾ
ಪುಟನಾಡಷ್ಟ್ರೋಷ್ಠನುದ್ಯದ್ಭ್ರುಕುಟಿಕುಟಿಲ ಭಾಳಸ್ಥಳಂ ಸ್ವೇದಬಿಂದೂ ॥
ತ್ಕಟಗಂಡಸ್ಥಾನನುಜ್ಜೃಂಭಿತ ಭುಜಶಿಖರಂ ಗದ್ಗದೀಭೂತನಾದೋ ।
ತ್ಕಟಕಂಠಂ ಭೈರವಾಡಂಬರಮನಿಱಿಪಿದಂ ಯುದ್ಧದೊಳ್ ಸಾರ್ವಭೌ
ಮಂ ॥ ೧೦೪॥

ಮ|ಸ್ರ|| ತಳಮಂ ಮೂಱುದ್ಧಿ ಧಾತ್ರೀತಳದೊಳರಿಮಹೀನಾಥವಿಖ್ಯಾತಜಾತು |
ಬ್ಬಳಮಂ ಬಂದೈಸುವಂಕಂಗಳೊಳೆ ಕಲುಷದಿಂ ಪೀರ್ವವೋಲ್ ನೋಡಿ
ಬಾಹಾ ||
ಬಳದಿಂ ಕಾಲಾಳನಾಳಿಂ ಸದೆದು ತುರುಗಮಂ ತತ್ತುರಂಗಾಘಾತಂ ಪೊ |
ಯ್ದಳವಿಂದಾದಂತಿಯಂ ದಂತಿಯೊಳೆ ಬಡಿದು ಪೇಸೇಱಿ ಕೊಂದಂ ಮು
ಕುಂದಂ || ೧೦೮||

ಕಂ|| ಮದಗಜವೆರಡಱ ಬಾಲದ |
ಮೊದಲಂ ಪಿಡಿದೆತ್ತಿ ಪೊಯ್ದು ನುಗ್ಗೊತ್ತಿದೊಡಾ ||
ಸ್ಯದಿನುಗುವ ರಕ್ತಮುರಿಯೆನೆ |
ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ || ೧೦೯||
(ಇದು ರೌದ್ರಂ)

ಸೂತ್ರಂ ೫೭.

ಕೃತವಿಸ್ಮಯಜಾತಮುದ |
ದ್ಭುತಮಾಲಂಬನ ವಿಭಾವಮತಿಚಿತ್ರಚಮು ||
ತ್ಕೃತಿ ತದ್ವದಭಿನಯಸ್ತೋ |
ತ್ರತೆಯುದ್ದೀಪನ ವಿಭಾವಮಾರಸಕಕ್ಕಂ ||

ಸೂತ್ರಂ ೫೮.

ಅಕ್ಷಿಮುಖವಿಕಸನಾದಿಯೆ |
ಲಕ್ಷಿಪೊಡನುಬಾವಮೆಯ್ದೆ ಪುಳಕಾದಿಯೆ ತಾ ||
ನೀಕ್ಷಿಸೆ ಸಾತ್ವಿಕಮುರುಹ |
ರ್ಷಾಕ್ಷಮುಸಂವೇಗಮಾದಿ ಸಂಚಾರಿವಲಂ ||

ವೃತ್ತಿ|| (ಅತಿಚಿತ್ರಾದಿ) ದಿವ್ಯದರ್ಶನೇಪ್ಸಿತಮನೋರಥಾವಾಪ್ತಿದೇವಕುಲಾದಿಗಮನ ಮುಪವನಸಭಾಮಾಯಾವಿಮಾನೇಂದ್ರಜಾಲಾತಿಶಯಚಿತ್ರಕರ್ಮಾದಿ ಯಾಲಂಬನವಿಭಾವಂ, ತದ್ವದಭಿನಯಸ್ತೋತ್ರವ್ಯಾವರ್ಣನಚಿಂತಾದಿಯುದ್ದೀಪನವಿಭಾವಂ, ನಯನವಿಸ್ತಾರಾನಿಮಿಷಪ್ರೇಕ್ಷಣಸಾಧುವಾದದೇಹಾಂಗುಲಿ ಭ್ರಮಣಾದಿ ಯನುಭಾವಂ, ರೋಮಾಂಚಾಶ್ರುಸ್ವೇದಾದಿ ಸಾತ್ವಿಕಭಾವಂ, ಹರ್ಷಾವೇಗಜಡತಾದಿ ವ್ಯಭಿಚಾರಿಭಾವಂ, ಇವಱಿಂ ವಿಸ್ಮಯಸ್ಥಾಯಿ ಯನುಭೂಯಮಾನಮಾದೊಡದ್ಭುತರಸಂ.

ಮ|| ಮನಮುಂ ದಿಟ್ಟಿಯುಮೆಯ್ದುದಂಬುನಿಧಿಯಂ ಮುಂ ದಾಂಟಿದಂ ದಾಂಟಿ ತ|
ದ್ವನಪಾಲರ್ಕಳನಿಕ್ಕಿ ಕೂಡೆ ಬನಮಂ ಕಿೞ್ತಿತ್ತಿದಂ ಕಿೞ್ತುಮೊ ||
ರ್ವನೆ ಪಾೞ್ದೞ್ವಿನಮೊಂದೆ ಕೊಳ್ಳಿಯೊಳೆ ಸುಟ್ಟಂ ಲಂಕೆಯಂ ಚೋದ್ಯಮೆಂ |
ದೆನಸುಂ ವಿಸ್ಮಯಮುತ್ತು ಮಾರುತಿಯನಾಲಂಕೇಶ್ವರಂ ಮೆಚ್ಚಿದಂ ||

ಮ|| ಅತಿಸೂಕ್ಷ್ಮೇಕ್ಷಣಸಂತುಮಂಥನಸತೀಸಾಂದರ್ಯದೊಳ್ ವಿಕ್ರಮಾ |
ಸ್ವಿತನೆಂತುಂ ಪೆೞವಂ ಮಹಾಜಿಮುಖದೊಳ್ ಸಿರ್ದಿತಸಮ್ಯಗ್ಬಹು ||
ಶ್ರುತನೆಂದುಂ ಬಧಿರಂ ಕರಂ ಪರಪರೀವಾದಂಗಳೊಳ್ ನೋೞ್ಪೊಡ |
ದ್ಭುತಮಾಶ್ಚರ್ಯಮಭೂತಪೂರ್ವಮೆಸಕಂ ಶ್ರೀಗಂಡಮಾರ್ತಂಡನಾ ||

ವ|| ಮತ್ತಂ-

ಕಂ|| ಬೇಱೊಂದದ್ಭುತರಸಮಂ |
ಬೀಱುತ್ತುಮನೇಕವಿಧದ ಫಲಪರಿಣತಿಯಿಂ ||
ದಾಱುಂ ಋತುಗಳುಮೊಡನೆಯೆ |
ತೋಱಿದುವು ತಪಃಪ್ರಭಾವದಿಂ ತನ್ಮುನಿಯಾ || ೧೧೨||

(ಇವದದ್ಭುತರಸಂ)

ಸೂತ್ರಂ ೫೯.

ಕಂ|| **ಭಯುದೆ ಭಯಾನಕರಸಮಾ** |
ರಯೆ ರಿಪುಸರ್ಪಾದಿ ಪಂಪಿನಾಲಂಬನಮಾ ||
ಭಯಹೇತುಗರ್ಜಿತಾದಿಯೆ |
ನಯದುದ್ದೀಪನವಿಭಾವಮಾರಸಕಕ್ಕುಂ ||

ಸೂತ್ರಂ ೬೦.

ಕಂಪಸ್ವೇದಾದಿಯದ |
ಕ್ಕಾಂಪನುಭಾವಂ ಕರಂ ವಿವರ್ಣಾದಿಯೆ ಮ ||
ತ್ತಂ ಪುದಿದ ಸಾತ್ವಿಕಂ ತಾ |
ಸಂ ಪರಿದೈನ್ಯಭ್ರಮಾದಿ ಸಂಚಾರಿಯೆ ತಾಂ ||

ವೃತ್ತಿ|| ರಿಪುಸರ್ಪಪಿಶಾಚಭೂತಾದಿಶೂನ್ಯಗೃಹಾರಣ್ಯಗಮನಾದಿವ್ಯಾಳಮೃಗಾದಿ - ಯಾಲಂಬನವಿಭಾವಂ, ತದ್ವಿಕೃತಸ್ವರಶ್ರವಣತದಾಲೋಚನಸ್ವಜನವಧ ಬಂ

ಥಾದಿದರ್ಶನಶ್ರವಣಮುದ್ದೀಪನವಿಭಾವಂ, ಕರಕಂಪಚಲದೃಷ್ಟಿನಿರೀಕ್ಷಣ ಹೃದಯಸಾದಸ್ಪಂದಶುಷ್ಕೋಷ್ಠಕಂಠತ್ವಮನುಭಾವಂ, ಮುಖವೈವರ್ಣ್ಯ ಸ್ವರಭೇದಾದಿ ಸಾತ್ವಿಕಭಾವಂ, ಶಂಕಾಪಸ್ಮಾರಮರಣತ್ರಾಸಚಾಪಲ್ಯಾವೇಗ ದೈನ್ಯಮೋಹಾದಿವ್ಯಭಿಚಾರಿಭಾವಂ, ಇವರ್ಱಿಂ ಸ್ವಾದ್ಯಮಾನಮಾದ ಭಯ ಸ್ಥಾಯಿಯೇ **ಭಯಾನಕ**ರಸಂ.

ವಿಚಾರಂ

ಸ್ತ್ರೀಯರ್ಗಂ ನೀಚಪ್ರಕೃತಿಯುಳ್ಳರ್ಗಂ ಭಯಂ ಸ್ವಭಾವಂ, ಧೀರೋದಾತ್ತಾದ್ಯುತ್ತಮರ್ಗೆ ಭಯಂ ಕೃತಕಮೆನಿಪ್ಪುದು. ಅವರ್ ಗುರುಮುನೀಶ್ವರಾದಿಗಳಲ್ಲಿ ಕರಕಂಪನಗದ್ಗದಸ್ವರಾದಿಗಳಿಂ ಮಾಳ್ಪ ಭಯಂ ಕೃತಕಂ, ಅಂತಾದೊಡವರ್ಗಮೆಲ್ಲಾರಸಂಗಳುಮಿಂತು ಕೃತಕಂಗಳಕ್ಕೆ ಬೆಲೆವೆಣ್ಣ ರತಿಯಂತೆಂದೊಡಂತಾಗದು. ನೃಪನ ಮೃದುಚೇಷ್ಟೆಗಳಿಂ ವಿನೀತಪ್ರಕೃತಿಯೆಂದು ಗುರು ತಿಳಿವನದು ಸಫಳಮಾದುದು. ಅವಳ್ ತೋರ್ಪ ರತಿ ಧನನಿಮಿತ್ತಮಲ್ಲದೆ ಸಾಜಮಲ್ಲೆಂದು ಚದುರಂ ಕಾದಲನದಂ ತಿಳಿವನಪಾತೆಱಿಂ. ಪ್ರಜಾಪಾಲನಾರ್ಥಮಿನರಸುಗಳ್ ಕ್ರೋಧವಿಸ್ಮಯಂಗಳಂ ತೋರ್ಪರ್, ಅವುಂ ವ್ಯಭಿಚಾರಿಯಲ್ಲದೆ ಸ್ಥಾಯಿಯಲ್ತು.

ಲಕ್ಷ್ಯಂ.

ಮ|| ಮಕರಂ ಬಾಯ್ದೆಱೆದಂದದಿಂ ತೆಱೆದ ಬಾಯ್ ಕೊಂಕಿರ್ದ ಕೋರ್ವಾಡೆ ನೆ|
ಕ್ಕ ಕದಂಪೆತ್ತಿದ ಪುರ್ಬು ಬತ್ತಿದ ಬಸಿರ್ ಪೋತಂದ ಕಣ್ಣುದ್ಘಮೇ ||
ಘುಕತೋರಧ್ವನಿಗೇಳ್ದ ಕೇಸರಿವೊಲಿರ್ದಾಭೀಳಕೇಶಾಳಿ ಸ |
ರ್ಪಕನದ್ಭೂಷಣಭೀಷಣಂ ಭಯದಮಾಯ್ತಾರಾಕ್ಷಸೀರೂಪಕಂ || ೧೧೩ ||

ಕಂ|| ಬೆರಲಂ ಕರ್ಚವ ಪುತ್ರಂ |
ಪರಿದೇಱುವ ಕೆಯ್ಗುಪಿಕ್ಕಿ ಪೊಡಮಡುವ ಭಯ ||
ಜ್ವರದಿಂ ನಡುಗುವ ಭೀರುಗ |
ಳರೆಬರ್ ಕನ್ನಡಿಸಿದರ್ ಭಯಾನಕರಸಮಂ || ೧೧೪||

(ಇದು ಭಯಾನಕಂ)

ಸೂತ್ರಂ ೬೧.

ಮ|| ಬಡವಿರ್ದೊಂದು ಜುಗುಪ್ಸೆಯಿಂದೆ ಸಲೆ ಬೀಭತ್ಸಂ ಪೊಡಮಟ್ಟಿಗಂ ಬೞಿ |
ಕ್ಕದು ತಾನೆಯ್ದು ಜುಗುಪ್ಸಿತೇಕ್ಷಣವಿರಕ್ತಿದ್ವಂದ್ವದಿಂ ದ್ವಂದ್ವಮಾ ||
ಯ್ತುದಿತಾಲಂಬನಮಾಜುಗುಪ್ಸಿತೆಗೆ ದುರ್ಗಂಧಾದಿಯುದ್ದೀಪನಂ |
ಪುದಿಗುಂ ತದ್ರಸದೇೞ್ಗೆಯೆಂಬುದು ರಸಜ್ಞರ್ ಪೇೞ್ದ ಮಾರ್ಗಕ್ರಮಂ ||

ಸೂತ್ರಂ ೬೨.

ಕಂ|| ಮೂಗಂ ಮುಚ್ಚುವುದದು ಮೊದ |
ಲಾಗೊರೆಯಲ್ ತದ್ರಸಾನುಭಾವಮುದಂಗಂ ||
ತೂಗುವುದಾದಿಯೆ ಸಾತ್ವಿಕ !
ಮೇಗಂ ನಿರ್ವೇಗಮಾದಿ ಸಂಚಾರಿವಲಂ ||

ವೃತ್ತಿ|| ಹೃದ್ಯಮಲ್ಲದ ಛರ್ದಿವ್ರಣಕುಷ್ಠಾದಿಜುಗುಪ್ಸಿತಶರೀರದರ್ಶನಶ್ರವಣಾದಿಯಾಲಂಬನ ವಿಭಾವಂ; ಪೂತಿಗಂಧಕ್ರಿಮಿಕೀಟಾದಿ ಯುದ್ದೀಪನವಿಭಾವಂ; ಶರೀರಸಂಕೋಚನಂ ನಾಸಾಮುಖಾದಿವಿಕೂಣನಾಚ್ಛಾದನಂ, ನಿಷ್ಠೀವ ಮೊಗಡಿಕೆ ಯಿವು ಮೊದಲಾದುವನುಭಾವಂ; ಕಂಪವೈವರ್ಣ್ಯಸ್ವರಭೇದಾದಿ ಸಾತ್ವಿಕಭಾವಂ; ಮೋಹಾಪಸ್ಮಾರರೋಗ್ರಗದಾದಿ ವ್ಯಭಿಚಾರಿಭಾವಂ, ವಿರಕ್ತಿ ನಿರ್ವೇದಮತಿಧೃತ್ಯಾದಿವ್ಯಭಿಚಾರಿಭಾವಂ; ಇವಱಿಂ ಚರ್ವ್ಯಮಾಣಮಾದ ಜುಗುಪ್ಸೆಯೇ ಬೀಭತ್ಸರಸಂ.

ಲಕ್ಷ್ಯಂ.

ಕಂ|| ಮಱಿದಾಗುಳಿಸಲ್ ಬಾಯಂ |
ತೆಱಿದೊಡೆ ದುರುದುರುಸುತಿರ್ಪ ಮದ್ಯದ ಕುಱಿಯಂ ||
ಮಱಿಯಿಸುಗುಮವನ ಬಾಯೆಂ |
ತೆಱಿಗುವನೆಮ್ಮಜ್ಜಿ ಪೋಗೆ ನೂಂಕುವಳೆನ್ನಂ || ೧೧೫||

(ಇದು ಜುಗುಪ್ಸಿತ ಬೀಭತ್ಸಂ)

ವ|| ಮತ್ತಂ.

ಕಂ|| ಪರಿವರುಣಜಲದಿನುಣ್ಮುವ |
ಕರುಳಿಂ ಚಿಮಿಚಿಮಿಸುತಿರ್ಪ ಕೋೞ್ಮಿದುಳಿಂ ಸಂ ||
ಗರರಂಗಮಾವಗಂ ಕೊ |
ಕ್ಕರತೆಯನೊಡರಿಸದದಾರ ಕಣ್ಗಂ ಮನಕಂ || ೧೧೬||

(ಇದು ಜುಗುಪ್ಸಿತೇಕ್ಷಣಬೀಭತ್ಸಂ.)

ವೃ॥ ಅಡಗಿನ ತೋಲ ನೆತ್ತರ ಮಿದುಳ್ಗಳ ಶಲ್ಯದ ಪುಂಜವೊತ್ತಿ ಬಂ ।
ದಡಸುವ ವಾತಪಿತ್ತಕಫದೋಷಸಮೂಹದ ಪತ್ತಿ ನಿಲ್ವುದೆಂ ॥
ದೊಡೆ ಪೆಱತೇಂ ಕ್ರಿಮಿವ್ರಜದ ಮೂತ್ರಪುರೀಷದ ಕೊಂಡಮೆಂದುಮಿ ।
ಯೊಡಲಿದಱಿಂದಮಂ ಬಗೆದು ಭಾವಿಸಿ ಪೇಸದುದೇಕೆ ಜೀವನೇ ॥ ೧೧೭॥

ವ॥ ಮತ್ತಂ,

ಕಂ॥ ನರಕದ ನೆರೆಮನೆ ಯೊಡಲೆಂ ।
ಬರ ಮಾತಂತಿರ್ಕೆ ನರಕಮೇಱುಮನೊಂದಾ ॥
ಗಿರಿಪ ಬಗೆಯಿಂ ವಿಧಾತ್ರಂ ।
ವಿರಚಿಸಿದಂ ಸಪ್ತಧಾತುಮಯಮೆನಿಪ್ಪೊಡಲಂ ॥ ೧೧೮॥

ವ॥ ಮತ್ತಂ.

ಕಂ॥ ನಿಧಿ ದುಸ್ತರಜನ್ಮಾಂಭೋ ।
ನಿಧಿ ಕರ್ಮಕ್ಷಯವಿರೋಧಮುವರೋಧಂ ಶ್ರೀ ॥
ವಧು ಕುಲಟಾವಧುವೆಂಬೊಂ ।
ದಧಮತೆ ತಳ್ತತ್ತು ಚಕ್ರವರ್ತಿಯ ಮನದೊಳ್ ॥ ೧೧೯॥

(ಇವು ಮೂಱುಂ ವಿರಕ್ತಿಬೀಭತ್ಸಂ)

ಸೂತ್ರಂ ೬೩.

ಕಂ॥ ಶಮಭಾವಪ್ರಭವಂ ಶಾಂ ।
ತಮಕ್ಕುಮಂತಾಶಮತ್ವಮುಂ ವರ್ತಿಸುಗುಂ ॥
ಸಮನಿಸಿ ಸಮ್ಯಗ್ಜ್ಞಾನಂ ।
ತಮಮುಂ ರಾಗಮುಮನಲೆದು ತೊಲಗಿಸೆ ಮನದೊಳ್ ॥

ಸೂತ್ರಂ ೬೪.

ಕಂ॥ ಶಿವಪದಮೆ ಮತ್ತದಕ್ಕೆ ।
ಪ್ಪುವುದಾಲಂಬನ ವಿಭಾವಮಾ ಮೋಕ್ಷಾರ್ಥಿ ॥
ಪ್ರವಚನಸಾರಮೆ ಮಿಗೆ ಕೇ
ಳ್ವವರ್ಗುದ್ದೀಪನವಿಭಾವಮಾರ್ಯರ ಮತದಿಂ ॥

ಸೂತ್ರಂ ೬೫.

ಕಂ॥ ಪಗೆಕೆಳೆಯಂ ಸರಿಗಾಣ್ಬುದೆ ॥
ನೆಗಳ್ದನುಭಾವಂ ಪೊದಳ್ದ ಪುಳಕಸ್ತಂಭಾ ।
ದಿಗಳವು ಸಾತ್ವಿಕಭಾವಂ ।
ಸೊಗಯಿಪ ಮತ್ಯಾದಿ ಸಂದ ಸಂಚಾರಿ ವಲಂ ॥

ವೃತ್ತಿ॥ ಮೋಕ್ಷಪದಮೆ ಆಲಂಬನವಿಭಾವಂ, ಸದ್ಗುರುನಿರೂಪಶ್ರವಣವೈರಾಗ್ಯಸಂಸಾರಭೀರುತ್ವತತ್ವಜ್ಞಾನವೀತರಾಗಪರಿಶೀಲನಪರಮೇಶ್ವರಾನುಗ್ರಹಾದಿಯುದ್ದೀಪನವಿಭಾವಂ,ಸಮರಸೀಭಾವಯಮನಿಯಮಾಧ್ಯಾತ್ಮ ಶಾಸ್ತ್ರಚಿಂತನಾದಿಯನುಭಾವಂ, ಸ್ತಂಭನಾನಂದಾಶ್ರುಪುಳಕಾದಿ ಸಾತ್ವಿಕಭಾವಂ, ಧೃತಿಸ್ಮೃತಿಮತಿನಿರ್ವೇದಾದಿ ವ್ಯಭಿಚಾರಿಭಾವಂ, ಇವಱಿಂ ಸ್ವಾದ್ಯಮಾನಮಾದ **ಶಮ**ಸ್ಥಾಯಿಯೆ **ಶಾಂತರಸಂ**.

ಲಕ್ಷ್ಯಂ.

ಮ॥ಸ್ರ॥ ಮನಮುಂ ಮುಟ್ಟೈಸಿ ಮಧ್ಯಂದಿನದ ಬಿಸಿಲ ಬೆಳ್ದಿಂಗಳಂತಾಗೆ ತನ್ನಿಂ ।
ತನುವಂ ಬೇರ್ಕೆಯ್ದು ಬಾಹ್ಯೇಂದ್ರಿಯಮನುಱಿದು ಕೆಯ್ಯಿಕ್ಕಿ ಕೆಯ್ಯಿಕ್ಕಿ ನಿರ್ವಾ ॥
ಣನಿವಾಸಕ್ಕೊರ್ವನಂತಮುರ್ಖನಭಿಮುಖನಾದಿತ್ಯಬಿಂಬಕ್ಕೆ ಯೋಗೀಂ ।
ದ್ರನತಂದ್ರಂ ನಿರ್ನಿಮೇಷಂ ನಗನಿಕಟಘಟದ್ರತ್ನಕೂಟಂಬೊಲಿರ್ದಂ ॥

ವ॥ ಮತ್ತಂ.

ಚಂ॥ ಗಿಡಿಗಿಡಿಜಂತ್ರಮಾಯ್ತೊಡಲೊಡಲ್ವಿಡಿದಿರ್ದಖಿಳೇಂದ್ರಿಯಂಗಳುಂ ।
ಮಿಡುಕದೆ ಪೋದುವಂತವಱ ಪೋಗಿನೊಳಾಯ್ತು ಮನಕ್ಕೆ ಸೌಖ್ಯಮಾ ॥
ಗಡಣಿಪ ಸೌಖ್ಯದಿಂ ನೆಲಸಿದತ್ತು ಶುಭಾನ್ವಿತಮಪ್ಪ ಜಾನಮುಂ ॥
ತೊಡರಿಪ ಜಾನದೊಂದೆಸಕದಿಂ ಪಱಿಪಟ್ಟುವು ಪಾಪಪಾಂಸುಗಳ್ ॥

ವ॥ ಮತ್ತಂ.

ಚಂ॥ ಒಱಲೆ ತಗುಳ್ದು ಪುತ್ತಿಡುವುದೆಯ್ದೆ ಮೃಗಾವಳಿ ಕೋಡ ತೀಂಟಗೀ ।
ಡಱಿವುವು ಪಕ್ಕಿ ಗೂಡಿಡುವುದಾವರಿಸಿರ್ದ ಲತೋತ್ಕರಂ ಪಗಂ ॥
ಡಱಿವುವು ನಿಂದ ಪಾವನತಪೋವನದೊಳ್ ಪ್ರತಿಮಾನಿಯೋಗದೊಳ್ ।
ನೆಱಿದಮುಳಾಂತರಂಗನೆನಿಸಿರ್ದ ಮುನೀಂದ್ರನ ನಿಶ್ಚಲಾಂಗದೊಳ್ ॥೧೨೨॥

ವ|| ಮತ್ತಂ.

ಕಂ|| ಧಾರಾಭಿಷೇಕಮದುವೆ ತ।
ಪೋರಾಜ್ಯಕ್ಕೆನಿಸೆ ಸುರಿವ ಮೞೆ ಘನರುತಿ ತೂ ||
ರ್ಯಾರವಮಾಗೆ ಮುನೀಶಂ ।
ಬೇರೂಱಿದ ಬೞಿಲ ತೆಱದೆ ಮರವೊಲಿರ್ದಂ || ೧೨೩||

(ಇದು ಶಾಂತರಸಂ)

ಶಾಂತರಸವಿಚಾರಂ.

ವ|| ಶಾಂತರಸಂ ವಿಷಯಜುಗುಪ್ಸಾರೂಪತ್ವಮಾಗಿಯುಂ ಬೀಭತ್ಸದೊಳಂತ ರ್ಭಾವಮಲ್ತು. ಜುಗುಪ್ಸೆಯಿದರ್ಕೆ ವ್ಯಭಿಚಾರಿಯಪ್ಪುದಱಿಂದದು ತಾಂ ಸ್ಥಾಯಿತ್ವಮನೆಯ್ದದು. ತಾನೆಂತೆಂದೊಡೆ :- ಶಾಂತರಸ ಪರಿಪೂರ್ಣತೆಯೊ ಳದು ನಿರ್ಮೂಲಮಪ್ಪುದಱಿಂ; (ಧರ್ಮ) ವೀರದೊಳಂತರ್ಭಾವಮೆಂದೊಡ ದುವು ಮಲ್ತು. ವೀರರಸಮಭಿಮಾನರೂಪತ್ವಂ, ಶಾಂತರಸಮಹಂಕಾರೋಪ ಶಮೈಕರೂಪತ್ವಂ ಅದಱಿಂ ವೀರಶಾಂತಕ್ಕೇಕತ್ವಪರಿಕಲ್ಪನಮಾಗದು. ಅಂತಾದೊಡೆ ವೀರರೌದ್ರಕ್ಕಮೇಕತ್ವಮಪ್ಪುದಱಿಂ. ಧರ್ಮವೀರಾದಿಗಳ ಚಿತ್ತವೃತ್ತಿ ವಿಶೇಷಂಗಳವು ಸರ್ವಾಹಂಕಾರಂಗಳ್, ಅಹಂಕಾರರಹಿತಂ ಶಾಂತ ರಸಂ, ಈ ಪಾಂಗಿಂ ಸ್ಥಾಪಿಸಿದೊಡೇನುಂ ವಿರೋಧಮಾಗದು. ಇಂತೊಂ ಬತ್ತುರಸಂಗಳ್ ಬೇರ್ಪಡಿಸಲ್ಪಟ್ಟುವು.—

(ಭಿನ್ನ ಭಿನ್ನ ರಸೋತ್ಪತ್ತಿಕ್ರಮಂ)

ಸೂತ್ರಂ ೭೬.

ಕಂ|| ಶೃಂಗಾರದಿಂದೆ ಹಾಸ್ಯಂ ।
ಸಂಗಳಿಸಿದ ರೌದ್ರದಿಂದೆ ಕರುಣಂ ಸ್ಫುಟವೀ ||
ರಾಂಗದಿನದ್ಭುತಮಕ್ಕುಂ ।
ಪಿಂಗದೆ ಬೀಭತ್ಸುವಿಂ ಭಯಾನಕಮಕ್ಕುಂ ||

ಲಕ್ಷ್ಯಂ.

ವೃ॥ ಮಿದುಳಿಂದಣ್ಪಿಕ್ಕಿ ಬಂಬಲ್ಗರುಳ ಪಿಣಿಲ ಪೂಮಾಲೆಯಂ ಸೂಡಿ ನೆತ್ತ ।
ರ್ವಿದಿದೆತ್ತಂ ತೋರ್ಪ ಪಂದೋವಲ ನಿಱಿವಿಡಿದುಟ್ಟೞ್ತಿಯಿಂ ಶುಕ್ತಿಯೊ
[ಳ್ ತೀ ।
ವಿದ ಕೀಲಾಲಾಂಬುವಂ ಕಣ್ಮುಮುಚಿ ಪದೆಪಿನಿಂದೀಂಟಿ ಪಾಱ್ಯೆಸಿ ಕೆಯ್ಗ।
ಣ್ಮಿದ ರಾಗೋದ್ರೇಕದಿಂದಾಡುವ ದನುಜೆ ಭಯಭ್ರಾಂತಿಯಂ ಮಾಡಲಾ
[ರ್ತಳ್ ॥ ೧೨೪ ॥

(ಇಲ್ಲಿ ಭೀಭತ್ಸದಿಂ ಭಯಾನಕಂ ಪುಟ್ಟಿದುದು, ಇಂತುಱಿದುವನಱಿವುದು)

ಇನ್ನು ರಸಸಂಕರಂ.

ಸೂತ್ರಂ ೬೭.

ಚಂ॥ ಮುಸುಕಿನ ಭಂಗಿಯುಂ ನಡೆವ ಗಾಡಿಯುಮೊಪ್ಪಿರೆ ನೀನೆಗೆತ್ತು ಸಂ ।
ಕಿಸದಿರುಳೊರ್ವನಂ ಪಿಡಿದೊಡಾತನಿದೇನೆನೆ ನೋಡ ಬಿಟ್ಟು ಲ ॥
ಜ್ಜಿಸಿ ಬರೆ ಕಂಡು ಮೇಳದೊಡನಾಡಿಗಳೆನ್ನ ಮರುಳ್ತನಕ್ಕೆ ಱಿರೋ ।
ಡಿಸಿ ನಗುವಂತುಟಾದುದು ಮನಃಪ್ರಿಯ ನೀಂ ಮುನಿದಿರ್ದ ದೂಸಱಿಂ ॥
(ಇಲ್ಲಿ ಶೃಂಗಾರಹಾಸರಸಂಗಳ ಸಂಕರಂ)

(ಇನ್ನು ವಿರುದ್ಧರಸಂಗಳ್).

ಸೂತ್ರಂ ೬೮.

ಕಂ॥ ಕರುಣಾರಸಕ್ಕೆ । ವೀರಂ ।
ದೊರೆಕೊಳೆ ಶೃಂಗಾರರಸಕೆ ಬೀಭತ್ಸಂ ರೌ ॥
ದ್ರರಸಕ್ಕಮದ್ಭುತಂ ವೀ ।
ರರಸಕ್ಕೆ ಭಯಾನಕಂ ವಿರೋಧಿಗಳಕ್ಕುಂ ॥

ವ॥ ಇದು **ನಾಗವರ್ಮನ** ಮತಂ

ವ॥ ಮತ್ತಂ

---

1 ಕಾವ್ಯಾ—ಪ. 831, (ಪಾಠಾಂತರ) ಕರುಣಾರಸಕ್ಕೆ ಮಿಗೆಹಾ । ಸ್ಯರಸಂ...... ವಿರೋಧಕಮಕ್ಕುಂ.

ಸೂತ್ರಂ ೬೮. (a)

*ಕಂ|| ಬೆರಸದವೊಲಿರ್ಕೆ ಶೃಂಗಾ ।
ರರಸಂ ಬೀಭತ್ಸದೊಳ್ ಭಯಂ ರೌದ್ರದೊಳಂ ||
ಕರುಣಾರಸದೊಳ್ ವೀರಂ ।
ಪರಿಹಾಸದೊಳದ್ಭುತಂ ವಿರೋಧವಿದೆಂದುಂ ||

ವ|| (ಇದುದಯಾದಿತ್ಯನ ಮತಂ)

ವ|| ಮತ್ತಂ.

† ಗಣೇಶ್ವರಾದಿನಿಕೃತಸಾಹಿತ್ಯಸಂಜೀವನದಲ್ಲಿ ಶೃಂಗಾರಕ್ಕೆ ವೀರರೌದ್ರ ಬೀಭತ್ಸಕರುಣಾಶಾಂತಂಗಳರಿಗಳ್, ಹಾಸ್ಯಕ್ಕೆ ಕರುಣಾಭಯಾನಕಂ ರಿಪು; ಕರುಣಕ್ಕೆ ಹಾಸ್ಯಶೃಂಗಾರರೌದ್ರಶಾಂತಂ (ಗಳ್) ವಿರೋಧಿ; ಭಯಾನಕಕ್ಕೆ ವೀರವಮಿತ್ರಂ ; ರೌದ್ರಕ್ಕೆಹಾಸ್ಯಾದ್ಭುತಂ ಶಾಂತಂ [ಶೃಂಗಾರಂ] ಶತ್ರು ; ವೀರಕ್ಕೆ ಭಯಾನಕಂ ಪಗೆ ; ಅದ್ಭುತಕ್ಕೆ ರೌದ್ರಂ ಸಪತ್ನಂ, ಬೀಭತ್ಸಗೆ ಶೃಂಗಾರಮರಿ ; ಶಾಂತಕ್ಕೆ ಶೃಂಗಾರಂ ಮೆಚ್ಚದದಿಂತಱಿವುದು.

(ಸಾಹಿತ್ಯ ಸಂಜೀವನದ ಸಮ್ಮತಿ ಪದ್ಯಂಗಳ್)

ಸೂತ್ರಂ ೬೮. (b)

ಸ್ರ|| ವೀರಂ ಬೀಭತ್ಸರೌದ್ರಂ ನಿಜದೆ ಕರುಣಶಾಂತಂಗಳಿಂತೆಯ್ದೆ ತಾಂ ಶೃಂ ।
ಗಾರಕ್ಕಂ ವೈರಿಯಕ್ಕುಂ ಕರುಣಭಯಮಿವುಂ ಹಾಸ್ಯಕಂ ವೈರಿಯಾ ಶೃಂ||
ಗಾರಂ ಹಾಸ್ಯಂ ಬೞಿಕ್ಕಂ ಪರಿಕಿಸೆ ಸಲೆ ರೌದ್ರಂ ವಲಂ ಶಾಂತಮಿಂತುಂ।
ಕಾರುಣ್ಯಕ್ಕಂ ಹಿತಂ ತಾನೆನಿಸದು ಭಯಕಂ ವೈರಿಯಾ ವೀರವೆಂದುಂ ||

ಸೂತ್ರಂ ೬೮. (c)

ಸ್ರ|| ಶಾಂತಂ ಹಾಸ್ಯಾದ್ಭುತಂ ರೌದ್ರಕೆ ಪಗೆ ಭಯಮುಂ ಮತ್ತೆ ಶೃಂಗಾರ [ಮುಂ ದಲ್
ಶಾಂತಂ ವೀರಕ್ಕಮಿತ್ರಂ ಭಯಮುಱಿ ವಿಲಸದ್ರೌದ್ರವಂತದ್ಭುತಕ್ಕಂ ||
ಎಂತುಂ ವೈರಂ ಸಬೀಭತ್ಸಗೆ ಯರಿಯೆನಿಕುಂ ನಾಡೆ ಶೃಂಗಾರಮೇಗಂ ।
ಶಾಂತಕ್ಕಂ ಮೆಚ್ಚಿದಲ್ಲರ್ ಬೆಸಸುವರುಱಿ ಶೃಂಗಾರಮಂ ಬುದ್ಧಿವಂತರ್ ||

(ಇದು ಸಾಹಿತ್ಯ ಸಂಜೀವನ ಮತಂ)

* ಹಸ್ತಲಿಖಿತಪ್ರತಿಗಳಲ್ಲಿ ಗಣೇಶ್ವರಾಜ್ಞಿ, ಗಣೇಶ್ವರಾಗ್ನಿ, ಎಂಬ ಭಿನ್ನಪಾಠಗಳಂಟು ಗಣೇಶ್ವರಗಣಿ ಎಂದಿರಬಹುದು.

† ಇದು ಕವಿಕಾಮನ ಶೃಂಗಾರರತ್ನಾಕರದಲ್ಲಿದೆ. ಉದಯಾದಿತ್ಯನ ಅಲಂಕಾರದಲ್ಲಿ ವಿರೋಧರಸಗಳ ವಿಚಾರವೇ ಇಲ್ಲ. ಆದುದಱಿಂದ—ಇದು ಕವಿಕಾಮನ ಮತಂ ಎಂದಿರಬೇಕು.

ಲಕ್ಷ್ಯಂ.

ಕಂ|| ಕರಜಕ್ಷತಗಳಿತಸ್ರಾ್ತ್ಯ ।
ನರಕ್ತಕರ್ದಮಿತವಿಗ್ರಹಂ ಸವ್ರಣಿತಾ ||
ಧರಜಾತಪೂತಿಗಂಧಂ ।
ತರುಣೀಮುಖಮೆನಗೆ ಪಡೆದುದೊದವಿದಲಂಪಂ || ೧೨೫||

(ಇದು ದೋಷಂ)

ಸೂತ್ರಂ ೬೯

*ಕಂ|| ಎರಡುಂ ವಿರುದ್ಧರಸವೊಡ ।
ವೆರಸಿರೆ ತದನಂತರಸ್ಥವೊಂದನ್ಯರಸಂ ||
ಪರಿಪುಷ್ಟಮಾಗೆಯುಂ ವ್ಯಧಿ ।
ಕರಣಂ ಮೇಣ್ ಸನುಮುಮಾಗೆಯುಂ ನಿರ್ದೋಷಂ ||

ಲಕ್ಷ್ಯಂ.

ಚಂ|| ಅರುಣಜಲಾವಲಿಪ್ತಿ ಪೊಸಕುಂಕುಮದಂತಿರೆ ಕರ್ಣಲಗ್ನ ತೋ ।
ಮರಮುವತಂಸದಂತಿರೆ ನಖವ್ರಣರಾಜಿಯೆ ಭೂಷಣಾಳಿಯಂ ||
ತಿರೆ ಮಿದುಳುಣ್ಮೆ ಪುಷ್ಪಕೃತಶೇಖರದಂತಿರೆ ಕೊಂಡುಪೋದರ ।
ಚ್ಚರಸಿಯರಣ್ಕೆ ಬಿಟ್ಟ ಭಟರಂ ಕೊನೆ ಮೂಸೆಯ ಚೆನ್ನಪೊಂಗರಂ || ೧೨೬||

ವ|| ಇಲ್ಲಿ ವಿರುದ್ಧಂಗಳಾದ ಶೃಂಗಾರ ಬೀಭತ್ಸರಸಂಗಳ ನಡುವೆ ವೀರರಸಂ ಪೊಕ್ಕು ಪುಷ್ಟಿಯಾದುದು.

ಮ|| ಭಯದಿಂ ಕರ್ಚಿದುದೊಂದು ಪುಲ್ ಮುಗಿದ ಕೆಯ್ ಬಿಟ್ಟಿರ್ದ ಕೇಶಂಗಳುಂ ।
ನಯನಾಂಭಃಪ್ಲವವೋಡುವಲ್ಲಿ ಪಿರಿದುಂ ಕಾರುಣ್ಯಮಂ ಮಾಡೆ ವೈ ||
ರಿಯನಾಗಳ್ ನಗುವಂತುಟಾದುದು ಕನತ್ಖಡ್ಗಂ ವಿನಿರ್ಭಿನ್ನಕುಂ ।
ಭಯುಗದ್ವಿಣ್ನೃಪ ಕುಂಭಿಕುಂಭಯುಗಳಂ ಶ್ರೀವಿಕ್ರಮಾರ್ತಂಡನಾ ||

ವ|| ಇಲ್ಲಿ ವ್ಯಧಿಕರಣಮಾದುದಱಿಂ ನಿರ್ದೋಷಂ :—

ಸ್ಥಾಯಿವ್ಯಭಿಚಾರಿ ವಿಚಾರಂ

ವ|| ನಾಟಕಾದ್ಯಭಿನಯವ್ಯಾಪಾರದೊಳಾವಿಷ್ಕೃತಮಾಗಿ ತೋರ್ಪ ರಸಂಗಳಾತ್ಮಂಗಳೆನಿಪುವು. ಆ ಚಿತ್ತವೃತ್ತಿಗಳ್ ಸಾಮಾಜಿಕರ ಚಿತ್ತಮಂ ಭಾವಿಪುದಱಿಂ ಭಾವಂಗಳೆನಿಕುಂ, ಮನೋವೃತ್ತಿಗಳಾದುದಱಿಂ ಸ್ಥಾಯಿಗಳುಂ ವ್ಯಭಿಚಾರಿಗಳುಂ ಭಾವಂಗಳೆನಿಪುವು. ಅಲ್ಲಿ ಸ್ಥಾಯಿಗಳೊಂಭತ್ತು. ಅವುಂ

* ಈ ಲಕ್ಷ್ಯ ಲಕ್ಷಣಗಳು ನಾಗವರ್ಮನಿಂದ ಉಕ್ತವಾಗಿದೆ.

ಮುಂದೆ ಪೇೞಿಸಿಪಟ್ಟುವು. ಸಂಚಾರಿಗಳ್ ಮೂವತ್ತುಮೂಱುವುಂ ಕಡೆಯ ಪ್ರಕರಣದೊಳ್ ಪೇೞಿಸಿಪಡುವುವು.

ಪುಟ್ಟಿದ ಜೀವಂ ಶಕ್ತಿರೂಪದಿಂ ಪೇೞ್ದೀಜ್ಞಾನಗೃಹೀತನಾಗಿರ್ಪನ ವಾವು ವೆಂದೊಡೆ—ದುಃಖದ್ವೇಷಿ ಸುಖಾಸ್ವಾದನಲಂಪಟನಾಗಿರ್ಪುದು **ರತಿ.** ಆಂ ಭೋಗಿ ತಾಂ ದುಃಖಿಯೆಂದು ನಗುವಂದಮಂ ಮಾೞ್ಪುದು **ಹಾಸಂ,** ತನ್ನ ಸುಖೋತ್ಕರ್ಷಗೆ ವಿಪತ್ತು ಬರ್ಪುದೆಂದು ಶೋಕಿಪುದೆ **ಶೋಕಂ,** ಅಪಾಯ ಮಂ ಕುಱಿತು ಕೋಪಿಪುದೆ **ಕ್ರೋಧಂ,** ಅಪಾಯಹೇತುವಂ ಪರಿಹರಿಪೆಡೆ ಯೊಳುತ್ಸಾಹಂಮಾೞ್ಪುದು **ತ್ಸಾಹಂ,** ಅಪಾಯದತ್ತಣಿಂ ಬೆದಱುವುದು **ಭಯುಂ,** ತಾಂ ಗೆಯ್ವ ಕಜ್ಜವೊಳ್ಳಿತಲ್ತೆಂದು ಪೇಸುವುದು **ಜುಗುಪ್ಸೆ,** ತನ್ನಿಂ ಪೆಱರಿಂದಾದ ಕಾರ್ಯವೈಚಿತ್ರ್ಯಾದಿದರ್ಶನಾದಿಯಿಂ ವಿಸ್ಮಯಿಪುದು **ವಿಸ್ಮಯುಂ,** **ತಾಂ** ಬಿಡುವುದಱೊಳ್ ವೈರಾಗ್ಯಪರನಾಗಿ ಶಾಂತತ್ವಮಂ ಭಜಿಪುದು **ಶಮುಂ.** ಈ ಪೇೞ್ದ ಚಿತ್ತವೃತ್ತಿಗಳಿಂ ಶೂನ್ಯಮಾದ ಜೀವನಿಲ್ಲ. ಮತ್ತಲ್ಲಿ ಕೆಲಂಬರ ಚಿತ್ತವೃತ್ತಿಗಳ್ ವಿಭಾವಬಲದಿಂದಧಿಕಮಾಗಿರ್ಪುವು. ಕೆಲವು ಕಿಱಿದಾಗಿರ್ಪುವು, ಕೆಲವು ಚಿತ್ತವೃತ್ತಿಗಳ್ ವಿಷಯದಲ್ಲಿ ನಿಯೋಜಿಸಲ್ಪಟ್ಟು ವಾಗಿರ್ಪುವು. ಕೆಲವು ಪುರುಷಾರ್ಥದೊಳುಪಯುಕ್ತಂಗಳಾಗಿರ್ಪುವು. ಮತ್ತೆ ಕೆಲವು ಮತ್ತೊಂದು ಪ್ರಕಾರಮಾಗಿರ್ಪುವು ಇಂತೆಂಬ ಚಿತ್ತವೃತ್ತಿವಿಭಾಗ ದಿಂದುತ್ತಮಮಧ್ಯಮಾಧಮ ಪ್ರಕೃತಿಗಳೆಂದು ವ್ಯವಹಾರಂಗಳಾದುವು. ಇನ್ನಾ ಮತ್ಯಾದಿವ್ಯಭಿಚಾರಿಗಳುಂ ಚಿತ್ತವೃತ್ತಿ ವಿಶೇಷಂಗಳ್, ಉಚಿತವಿಭಾವ ದಿಂದೆ ಭಾವಂಗಳಾಗಿ ಜನ್ಮಮಧ್ಯದೊಳಿರ್ಪುದಱಿಂ ವ್ಯಭಿಚಾರಿಗಳಾದು ವೆಂತೆಂದೊಡೆ—ರಸಾಯನಂಗುಡಿದವಂಗೆ ಆಲಸ್ಯಗ್ಲಾನಿಶ್ರಮಾದಿಗಳಾಗವು, ಎತ್ತಾನುಂ ಮೇಣ್ ವಿಭಾವಬಲದಿಂ ದೊಱೆಕೊಂಡುದಾದೊಡೆ ವಿಭಾವಂ ಗಳ್ ಕೆಟ್ಟೊಡೆ ತಾವುಂ ಕಿಡುವುವು. ಅವೇ ಸಂಸ್ಕಾರವಿಶೇಷದಿಂ ರತ್ಯಾದಿಗಳ್ ಪತ್ತಿರ್ಪಂತೆ ತಾವಿರಲರಿಯವು. ರತ್ಯಾದಿಗಳ್ ಸಂಪಾದಿತಸ್ವಕರ್ತವ್ಯಂಗ ಳಾಗಿ ವಿಭಾವಂಗಳ್ ಕೆಟ್ಟೊಡಂ ತಾವುಂ ಕೆಟ್ಟುದಱಿಂತಿರ್ದುಂ ಸಂಸ್ಕಾರ ವಿಶೇಷದಿಂದೆ ಪ್ರಾಣಭೂಮಿಯ ಪತ್ತುಗೆಗುಂದವು. ಅವಸ್ಥಾಂತರವಿಷಯರ ತ್ಯಾದಿಯಖಂಡಮಾದುದಱಿಂ ಸ್ಥಾಯಿಯಾದುದವೆಂತೆನೆ-ಚಾಬಲದೇವಾರ್ಧ್ಯ ಚಕ್ರಿಸಕಲಚಕ್ರವರ್ತಿಗಳೆಂದುಂ ಪದಿನಾಱುತೊಂಭತ್ತಾಱುಸಾಸಿರ್ವರ್ ಪೆಂಡವಾಸದೊಳ್ ಮಾೞ್ಪ ರತಿಯವಿಚ್ಛಿನ್ನಮದಱಿಂ ಸ್ಥಿರಮಾದುದಱಿಂ ಸ್ಥಾಯಿಗಳೆನಿಪುವು. ಮತ್ತಮಾಸ್ಥಾಯಿರೂಪಚಿತ್ರವೃತ್ತಿಗಳೆಂಬ ಸೂತ್ರಂ ಗಳೊಳ್ ಪೋಣಿಸಿದಂತೆ ಮತ್ತುದಯಾಸ್ತಮಯವೈಚಿತ್ರ್ಯಶತಸಹಸ್ರ

ಧರ್ಮಂಗಳಂ ಪಡೆಯಲ್ಪಟ್ಟುವಾಗಿ ಸ್ಥಾಯಿಗಳಂ ನಾನಾಪ್ರಕಾರದಿಂ ರಂಜಿಸುತ್ತೆ ಸಂಚಾರಿಪುದಱಿಂ ಸಂಚಾರಿಗಳೆಂದು ಪೇೞಿಸಿಪಟ್ಟುವು. ಮತ್ತೆ ವಿೂತಂ ಗ್ಲಾನನಾದನೆಂದೊಡೇತಱಿಂದೆಂದದರ್ಕೆ ಹೇತುಪ್ರಶ್ನೆಯಂ ಮಾೞ್ಪರ್, ಅದು ಮುನ್ನಿಲ್ಲದೆಡೆಯೊಳ್ ಬಂದುದಱಿಂ. ರಾಮಚಂದ್ರನುತ್ಸಾಹಶಕ್ತಿಯುಳ್ಳವನಾಗಿರ್ದನೆಂದೊಡಾರುಂ ಹೇತುಪ್ರಶ್ನೆಯಂ ಮಾಡರಾತಂಗದು ಸ್ಥಾಯಿಯಾಗಿರ್ದುದಱಿಂ.ಇವಾವ್ಯಭಿಚಾರಿಗಳ್ಗಂ ಸ್ಥಾಯಿಗಳ್ಗಂ ದೃಷ್ಟಾಂತಂಗಳ್. ಅದು ಕಾರಣದಿಂ ರತ್ಯಾದಿಕಂಗಳ್ ವಿಭಾವಾದಿಯಿಂದುದ್ಬೋಧಕಂಗಳಾಗಿ ತಮ್ಮ ಸ್ವರೂಪೋಪರಂಜಕತ್ವದಿಂದುಚಿತಾನುಚಿತತ್ವಮಂ ತಳೆವುವು, ವಿಭಾವಾಭಾವದಿಂ ಕೆಟ್ಟೊಡಂ ಸರ್ವಜೀವಂಗಳೊಳ್ ವಾಸನಾರೂಪದಿಂದಿವಿರ್ಪುದಱಿಂ ಸ್ಥಾಯಿಗಳ್, ಆಮಾೞ್ಕೆಯಿಂ ವಿಭಾವಾಭಾವದಿಂ ವ್ಯಭಿಚಾರಿಗಳ್ ನಾಮಮಾತ್ರಮಿಲ್ಲದೆ ಪೋಪುವಪ್ಪುದಱಿಂ ವ್ಯಭಿಚಾರಿಗಳಾದುವು. * ಸ್ಥಾಯಿಗಳುಮೊರ್ಮೆರ್ಮೆ ವ್ಯಭಿಚಾರಿಗಳಪ್ಪುವು ಅದೆಂತೆಂದೊಡೆ ರಾವಣಾದಿಗಳೊಳನ್ಯೋನ್ಯಾನುರಾಗಾಭಾವದಿಂದಾದರತಿ ವ್ಯಭಿಚಾರಿಯಪ್ಪುದು. ಗುರುಪ್ರಿಯತಮಪರಿಜನಂಗಳಲ್ಲಿ ಯಥಾಕ್ರಮದಿಂ ನೆಗೞ್ದ ವೀರಶೃಂಗಾರರೋಷಂಗಳ್ ವ್ಯಭಿಚಾರಿಗಳಪ್ಪುವು. ಈ ಪ್ರಕಾರದಿಂ ಭಾವಾಂತರಂಗಳುಮಂ ಯೋಚಿಸಿಕೊಳ್ವುದು, ಅಲ್ಲಿ ಶಮಕ್ಕೊಂದೆಡೆಯೊಳಮ ಪ್ರಾಧಾನ್ಯಮಿಲ್ಲ. ವ್ಯಭಿಚಾರಿಯಿಲ್ಲಪ್ಪುದಱಿಂ ರತ್ಯಾದಿಗಳಲ್ಲಿ ಪಿರಿದುಂ ಸ್ಥಾಯಿತ್ವಮಾದುದಱಿಂ ಸ್ಥಾಯಿಯುಪ್ಪುದು.

**ಗದ್ಯ**

ಇದು

ಶತೇಂದ್ರ ಮುನೀಂದ್ರ ವಂದಿತಾರ್ಹತ್ಪರಮೇಶ್ವರ

ಪಾದಾರವಿಂದಾನಂದಮಕರಂದಾನಂದಿತ

ಭೃಂಗಾಯಮಾಣ

**ಕವಿಸಾಳ್ವ**

ವಿರಚಿತಮಪ್ಪ

ರಸರತ್ನಾಕರದೊಳ್

ನವರಸಪ್ರಪಂಚವಿವರಣಂ

**† ದ್ವಿತೀಯ ಪ್ರಕರಣಂ**

---

* ಕೆಲವು ಪ್ರತಿಗಳಲ್ಲಿ ಇಲ್ಲಿಂದ ಮುಂದಣ ಗ್ರಂಥಭಾಗವಿಲ್ಲ.

† ದ್ವಿತೀಯಾಶ್ವಾಸಂ ಎಂದು ಕೆಲವು ಪ್ರತಿಗಳಲ್ಲಿದೆ.

ಶ್ರೀ

# ನಾಯಕನಾಯಿಕಾವಿವರಣಂ.

## ತೃತೀಯ ಪ್ರಕರಣಂ.

---

(1) ಸೂತ್ರಂ ೭೦.

ಕಂ|| ಇಂಬಾಗಿ ನವರಸಕ್ಕಾ |
ಲಂಬನಮಕ್ಕುಂ ಪೊದಟ್ಟ ನಾಯಕರುಂ ನು ||
ಣ್ಪೆಂಬಿಡಿದ ನಾಯಿಕಾನಿಕು |
ರುಂಬಮುಮಂತವರ ತೆಱನನುಱೆ ಬಿಚ್ಚಳಿಪೆಂ ||

ವ|| ನಾಯಕಸಾಧಾರಣ ಲಕ್ಷಣಂ.

ಸೂತ್ರಂ ೭೧.

ಕಂ|| ಕ್ಷಿತಿವಿನುತಕುಲೀನತೆ ಶೌ |
ಚತೆ ಮಾನತೆ ಯೌವನತೆ ದೃಡತ್ವಂ ಮಾಧು ||
ರ್ಯತೆ ಧೀರತೆ ಜನದನುರಾ |
ಗಿತೆ ಯುತ್ಸಾಹಿತೆಯೆ ಸಾಜಮಾದ ಸಮತ್ವಂ ||

ಸೂತ್ರಂ ೭೨.

ಕಂ|| ಪ್ರಕಟಪ್ರತಾಪಿ ಶಾಸ್ತ್ರಾ |
ರ್ಥಕಾರಿ ಕಡುಚಾಗಿ ವಿನಯಧರ್ಮಂ ಸದ್ಬು ||
ದ್ಧಿಕಲಾವೇತ್ತೃ ಪ್ರಾಜ್ಞಂ |
ಸುಕರಂ ಪ್ರಿಯವಾದಿ ವಾಗ್ಮಿ ನಾಯಕನಕ್ಕುಂ ||

ವ|| ಮತ್ತಮಲ್ಲಿ.

---

(1) ಈ ಪ್ರಕರಣದಲ್ಲಿ ಸೂತ್ರಕ್ಕೆ ವೃತ್ತಿಯಿಲ್ಲ.

ಸೂತ್ರಂ ೭೩.

ಕಂ|| ಧೀರೋದಾತ್ತಲಲಿತರೀ |
ಧಾರಿಣಿಯೊಳ್ ನೆಗೞ್ದ ಧೀರಶಾಂತೋದ್ಧತರೆಂ ||
ದಾರಯೆ ಪೇೞ್ದೀಗುಣಯುತ |
ರೋರಂತಿರೆ ನಾಲ್ವರಾದರೆಂತೆನೆ ಪೇೞ್ವೆಂ ||

ಸೂತ್ರಂ ೭೪.

ಕ್ಷಮೆಯುಳ್ಳಂ ಗಂಭೀರನ |
ಸಮುಸತ್ವಂ ಸತ್ಕೃಪಾಬ್ಧಿಯವಿಕತ್ಥನನ ||
ಚ್ಛಮನಂ ನಿರಹಂಕೃತನು |
ತ್ತಮಧೀರೋದಾತ್ತನಾಯಕಾಖ್ಯಮನಾೞ್ಗುಂ ||

ಲಕ್ಷ್ಯಂ.

ಉ|| ಪ್ರಾಕೃತನಲ್ಲನೀ ದಶರಥಾಗ್ರತನೂಭವನೇಕವಾಕ್ಯನಾ |
ಶಾಕರಿಕರ್ಣಚಾಮರಯಶಂ ಚರಮಾಂಗನನನ್ತವೀರ್ಯನಿ ||
ಕ್ಷ್ವಾಕುಕುಲಾಮೃತಾರ್ಣವಸುಧಾಕಿರಣಂ ರಣಮೇರು ಲೋಕಲುಂ |
ಟಾಕನಿದಾಘತಾಪಶರವರ್ಷಣಮೇಘನುದಾತ್ತರಾಘವಂ || ೧೨೮||

ವ|| ಮತ್ತಂ.

ಚಂ|| ಗಗನಚರಪ್ರಚಂಡಬಲವೆತ್ತಿ ಬರುತ್ತಿರೆ ಕಾಳೆಗಕ್ಕಿದಂ |
ಬಗೆದನೆ ಜಾನಕೀಮುಖಸರೋರುಹದೊಳ್ ನೆಲಸಿರ್ದ ದೃಷ್ಟಿಯಂ ||
ತೆಗೆದನೆ ಕಾಲದಂಡಮುಮನೇೞಿಪ ತನ್ನ ಶರಾಸನಕ್ಕೆ ಮೆ |
ಲ್ಲಗೆ ಕರಶಾಖೆಯಂ ರಘುತನೂಭವನೊಯ್ದನದೇನುದಾತ್ತನೋ || ೧೨೯||
(ಇವಂ ಧೀರೋದಾತ್ತನಾಯಕಂ)

ಸೂತ್ರಂ ೭೫.

ಕಂ|| ವಸುಮತಿಯೊಳ್ ಸಚಿವಾಯ |
ತ್ತಸಿದ್ಧಿ ನಿಶ್ಚಿಂತನೆಸೆಯ್ದ ಸುಖಿ ಮೃದು ಭೋಗ ||
ಪ್ರಸರಂ ಕಲಾಪ್ರಿಯಂ ಪೆಂ |
ಪೆಸೆದಿರ್ಪಾ ಧೀರಲಲಿತನಾಯಕನಕ್ಕುಂ ||

ಲಕ್ಷ್ಯಂ.

ಚಂ|| ಕ್ಷಿತಿತಲಮಂ ಪ್ರಧಾನಮುಖದಿಂ ಪ್ರತಿಪಾಲಿಸುತಿರ್ದು ಭಸ್ಮಸಾ |
ತ್ಕೃತರಿಪುವರ್ಗನಾಗಿ ಮೃದು ಸತ್ಸುಖಿ ಚಿಂತೆಯನೆಯ್ದೆ ನೀಗಿ ವಿ ||
ಶ್ರುತಬಹುನೃತ್ಯಗೀತನುತವಾದ್ಯಕಲಾಪ್ರಿಯನೆಲ್ಲಿಭೋಗದಿಂ |
ಪ್ರತಿದಿವಸಂ ಪ್ರಮೋದನೆಸೆದಂ ಧೃತಸರ್ಮಳಧರ್ಮನಾನೃಪಂ || ೧೩೩||
(ಇವಂ ಧೀರಲಲಿತನಾಯಕಂ)

ಸೂತ್ರಂ ೭೬.

ಕಂ|| ರಸಿಕಂ ಮೃದುಶುಚಿ ಸುಖಿ ಸು |
ಪ್ರಸನ್ನನುರುಬಂಧುರಂ ದ್ವಿಜಂ ಮೇಣ್ ವಣಿಜಂ ||
ಎಸೆವ ವಿಲಾಸವಿವೇಕವಿ |
ಲಸಿತಂ ನುತಧೀರಶಾಂತನಾಯಕನಕ್ಕುಂ ||

ಲಕ್ಷ್ಯಂ.

ಮ|| ಧರೆಯೊಳ್ ಸಂದಧಿರಾಜವೈಭವದೆ ಬರ್ಪಂ ಸುಪ್ರಸನ್ನಂ ಸುಖೋ |
ತ್ಕರನಾದಂ ಶುಚಿ ವಿಪ್ರವಂಶಮಣಿ ಸಾಕ್ಷಾತ್ಕಾಮನೆಂದಾತನಂ ||
ಪುರಮಾರ್ಗಾಗತನಂ ಪ್ರಗಲ್ಭೆಯರಲಂಪಿಂ ತೋಱಿ ಕಣ್ಣಾರ್ವಿನಂ |
ನರನಾಥಾತ್ಮಜೆ ನೋಡಿ ಪುತ್ತಳಿವೆಡಂಗಂ ಪೆತ್ತಳಾತಾಣದೊಳ್ || ೧೩೧||
(ಇವಂ ಧೀರಶಾಂತನಾಯಕಂ)

ಸೂತ್ರಂ ೭೭.

ಕಂ|| ಧೀರೋದ್ಧತನೇತೃವಹಂ |
ಕಾರಿ ವಿಕತ್ಥನನೆ ವಂಚಕಂ ಚಂಡಂ ಮಾ ||
ಯಾರತನುದ್ವೃತ್ತಂ ವ್ಯಭಿ |
ಚಾರಿಮನಂ ನೆಗಟ್ದ ಮತ್ಸರಗ್ರಸ್ತನವಂ ||

ಲಕ್ಷ್ಯಂ.

ಮ|ಸ್ರ|| ಎನಗಂ ಬಲ್ಲಾಳ್ ಗಡಂ ಮಾನವನಭಿಭವಮಂ ಕೇಳಲಾದತ್ತ್ವಂಗಾ |
ಳ್ವನಮಂ ಪೂರ್ಣ್ವಿನ್ನೊಳಂ ದಾಯಿಗತನಮನಿವಂ ತೋರ್ಕೆ ದೋರ್ದಂಡ
ಕಂಡೂ ||
ಯನಮಂ ಚಂಡಾಸಿಸಂಘಟ್ಟದಿನೊಗೆವುರಿಯಿಂ ಮುಟ್ಟಿಪೆಂ ಮೂಱು
ಕಣ್ಣಾ |
ತನುವೆನ್ನೊಳ್ ಮೀಱಿ ಮಾಱಾಂತೊಡೆ ಪಡೆಯದೆ ಸಂತ್ರಾಸಮಂ ಚಂದ್ರ
[ಹಾಸಂ || ೧೩೨||
(ಇವಂ ಧೀರೋದ್ಧತನಾಯಕಂ)

ಸೂತ್ರಂ ೩೮.

ಕಂ|| ನಾಯಕರೆಲ್ಲಾರಸಕಂ |
ನಾಯಕರಕ್ಕುಂ ಸ್ವರೂಪಭೇದದಿನಂತಾ ||
ನಾಯಕರೆ ಸಿಂಗರದೊಳಿರೆ |
ವಾಯಮೆ ನಾಲ್ಕೆಱನನೊರ್ವರೊರ್ವರ್ ತಳೆವರ್ ||

ವ|| ಅಲ್ಲಿ.

ಸೂತ್ರಂ ೩೯.

ಕಂ|| ಅನತಿಶಯನಾಯಕಾಖ್ಯರೊ |
ಳನುಕೂಲಂ ದಕ್ಷಿಣಾತ್ಮಕಂ ಕುಟಿಲಂ ಧೃ ||
ಷ್ಟನೆನಿಪ್ಪ ನಾಲ್ಕುಭೇದಂ |
ಜನಿಯಿಸುಗುಮವಂ ಕ್ರಮೋಕ್ತಿಯಿಂದಂ ಪೇೞ್ವೆಂ ||

ಸೂತ್ರಂ ೪೦.

ಕಂ|| ನುತಶೀಲನೇಕಪತ್ನೀ |
ವ್ರತನಮಳಂ ನಿಯಮಿತಾತ್ಮನನುಕೂಲಂ ಹೃ ||
ತ್ಸ್ಥಿತಿದೋಱದೆ ಚದುರಿಂ ಸಮ |
ರತಿಯಂ ಪಲಸತಿಯ*ರ್ಗೆಸಗೆ ದಕ್ಷಿಣನೆನಿಕುಂ ||

* ರ್ಗೆ ಶೈಥಿಲ್ಯವನ್ನು ಹೇಳಬೇಕಾಗಿರುವುದು.

ಲಕ್ಷ್ಯಂ.

ಮ॥ಸ್ರ॥ ಕೆಳದೀ ಮಜ್ಜೀವಿತಾಧೀಶ್ವರನ ಗುಣಮನೇನೆಂದದಂ ಪೇೞ್ವೆನೊಂದಂ।
ತಿಳಿ ಮದ್ವೈವಾಹಸಂಬಂಧದ ಸಮಯದೊಳಂದೇಕಪತ್ನೀವ್ರತಂ ನಿ॥
ಶ್ಚಳಿತಂ ನೋಡಂದುತೊಟ್ಟಿಂದುವರಮದನೆ ದಲ್ ಭಾವಿಸುತಿರ್ಪನವ್ಯಾ।
ಕುಳಚಿತ್ತಂ ಜನ್ಮಜನ್ಮಾಂತರದೊಳಮೆನಗಂತಾತನಕ್ಕೆಂದಳೊರ್ವಳ್॥೧೩೩
(ಇವನನುಕೂಲನಾಯಕಂ)

ಉ॥ ನೋಟದಿನೊರ್ವಳಂ ನಗೆಯಿನೊರ್ವಳನೊಳ್ನುಡಿಯಿಂದವೊರ್ವಳಂ।
ಬೇಟದಿನೊರ್ವಳಂ ಪಿಡಿಯುತೊರ್ವಳನೋಕುಳಿವೊಯ್ವುತೊರ್ವಳಂ॥
ಆಟದೊಳೊರ್ವಳಂ ಜಳಕೆ ಮೆಯ್ಗೊಡುತೊರ್ವಳನೊಂದೆ ಮಾೞ್ಕೆಯಿಂ।
ದಾಟದೊಳೆಯ್ದೆ ತೃಪ್ತಿವಡಿಸಿರ್ದನವಂ ಗುಣರತ್ನಭೂಷಣಂ॥ ೧೩೪॥
(ಇವಂ ದಕ್ಷಿಣನಾಯಕಂ)

ಸೂತ್ರಂ ೮೧.

ಕಂ॥ ಪುಸಿಗಂ ಧೂರ್ತಂ ವಿಗೆ ವಿಗ।
ಡಸಿಂಗರಂ ನೆಗಟ್ದ ಕುಟಿಲನಕ್ಕುಂ ಧೃಷ್ಟಂ॥
ಎಸಗುವಪರಾಧಿ ನಾಣಿಲಿ।
ಪಸರಿಪ ಬೋಸರಿಗನಂತವಂ ಗತಮಾನಂ॥

ಲಕ್ಷ್ಯಂ.

ಮ॥ ಎನಗೀನಿನ್ನ ವಿಕಾರಮಂ ನವನಖವ್ಯಾಪಾರಮಂ ವಂಚಿಸ।
ಲ್ಕೆನಿಸಂ ನೀಂ ಪುಸಿವೇೞ್ದು ಮುಚ್ಚಿದೆಯುದರ್ಕಾಂ ಬಲ್ಲೆನೇ ನಿನ್ನ ನಾ॥
ಯ್ತನಮಂ ನಂಬದಿರೆಂದು ದೂಱುವವೊಲಿರ್ಪನ್ಯಾಂಗನಾಸಂಗಸಂ।
ಜನಿತಾಮೋದಮನೆಂತು ನೀಂ ಪುಸಿವೆ ಮೋಣೆಂತೆಂತದಂ ಮುಚ್ಚುವೈ॥೧೩೫॥
(ಇವಂ ಕುಟಿಲನಾಯಕಂ)

ಚಂ॥ ದೊರೆಗಿಡೆ ಬಾಯ್ಗೆ ಬಂದುದನೆ ಬಯ್ವನದಂ ಬಗೆಗೊಳ್ಳದೀಮುಖಾಂ।
ಬುರುಹಮನೊಲ್ದು ಚುಂಬಿಸುವನೋವದೆ ಬೆಟ್ಟಿತುವೊಯ್ವನೊತ್ತುವಂ॥
ಕರವನಡುರ್ತು ಕಾಯ್ದೊದೆವೆನಾಗಳೆ ಕಾಲ್ವಿಡಿದಿರ್ಪನಿಂತು ನಿ।
ಷ್ಕರುಣದಿನಾನವಂಗೆ ಮೊಗದೊಳ್ ಮುಸಿಸಂ ತಳೆವೆಂ ತಳೋದರೀ॥೧೩೬॥
(ಇವಂ ಧೃಷ್ಟನಾಯಕಂ)

ವ|| ಇವರ್ ನಾಲ್ವರುಂ ಶೃಂಗಾರನಾಯಕರ್.

ಸೂತ್ರಂ ೮೨.

ಕಂ|| ಇಂತೀರೆಣ್ಬರವರ್ ಗುಣ।
ವಾಂತುತ್ತಮಮಧ್ಯಮಂ ಜಘನ್ಯಾಹ್ವಯದಿಂ ||
ಸಂತರ್ ತ್ರಿವಿಧಂ ಬರ್ಕೆ।
ನ್ನಂತಾನಾಯಕರೆ ಗಣಿಸೆ ನಾಲ್ವತ್ತೆಣ್ಬರ್ ||

ಸೂತ್ರಂ ೮೩.

ಕಂ|| ಕಮನೀಯವಾಣಿ ಗೂಢೋ।
ಕ್ತಮಂತ್ರನತಿಚತುರ ನಖಿಳಕರ್ಮವಿಭೇದಂ ||
ಪ್ರಮದಾಕೋಪೋಪಾತ್ತ।
ಕ್ರಮಪರನೆನಿಸುವನೆ ನರ್ಮಸಚಿವನೆನಿಸಿರ್ಕುಂ ||

ಸೂತ್ರಂ ೮೪.

ಕಂ|| ವಿವಿಧವಿನೋದಾಶ್ರಯನೆನಿ।
ಸುವಂಗೆ ನಾಲ್ವರ್ ಸಹಾಯರಾಗಲೆ ವೇಟ್ಕುಂ ||
ಭುವನವಿನೂತ್ನರೆ ನಾಗರಿ।
ಕ ವಿಟ ವಿದೂಷಕಸುಪೀಠಮರ್ದ ಕರೆನಿಪರ್ ||

ಸೂತ್ರಂ ೮೫.

ಕಂ|| ಸರಸೋಪವಚನದೊಳ್ ನಾ।
ಗರಿಕಂ ಚತುರೋಕ್ತಿಯೊಳ್ ವಿಟಂ ಹಾಸ್ಯೋಕ್ತ್ಯಂ ||
ತರದೊಳ್ ವಿದೂಷಕಂ ಗ್ರಾ।
ಮ್ಯರೀತಿಯೊಳ್ ನುಡಿಯೆ ಪೀಠಮರ್ದಕನೆನಿಕುಂ ||

ವ|| ಮತಾಂತರದಿಂ ವಿಟಚೇಟವಿದೂಷಕಪೀಠಮರ್ದಕರೆಂದುಮುವರಂ ಪೇಟ್ದಿರರೆಬರ್, ಪೀಠಮರ್ದಕ ವಿಟ ಚೇಟ ವಿದೂಷಕರೆಂದು ಮುಂ ಪೇಟ್ದವರಲ್ಲಿ ರಾಜನಿಂದಣಮೆ ಕಿಱಿದಾದ ಗುಣವಂತಂ ತನ್ನ ನೃಪನ ಪೀಠಮನಣೆವುತ್ತೊತ್ತಿ ಕುಳಿರ್ಪುದಱಿಂ ಪೀಠಮರ್ದಕಂ, ಕಾಮವಿದ್ಯೆಯೊಂದಱೊಳ್ ನಿಪುಣಂ ವಿಟಂ, ನಾಯಕನಾಯಿಕಾ ಸಂಧಾನಕುಶಲಂ ಪ್ರಾಜ್ಞಂ ಚೇಟಂ, ಅವರಂ

ನಗಿಸುವಂ ವಿದೂಷಕಂ, ಈ ನಾಲ್ವರುಂ ನರ್ಮಸಖರೆನಿಪರ್, ನರ್ಮ ನೆಂದು ಶೃಂಗಾರಕೇಳಿ ಮಿತ್ರಂ, ಇದರ್ಕೆ ಸಮ್ಮತಿಶ್ಲೋಕಂ—

ಸತ್ಕೃತಂ || ಕಿಂಚಿದೂನಃ ಪೀಠಮರ್ದ ಏಕವಿದ್ಯೋ ವಿಟಸ್ಸ್ಮೃತಃ ||
ಸಂಧಾನಕುಶಲಶ್ಚೇಟೋ ಹಾಸ್ಯಪ್ರಾಯೋವಿದೂಷಕಃ ||

ವ|| ಇಂತೆಂಬರಾಸಖರ ವಾಗಾದಿಪ್ರೌಢಿಯಖಿಳವಿಭೇದಂ, ಕನ್ನಡದೊಳ್ ನಾಗರಿಕಾದಿ ಚತುಷ್ಟಯಮುಂ ಪೇಟ್ವರದನಱಿಗೆ. ನಗರವಾರ್ತಾವಿಶೇಷ ಮನಱಿದರಸಂಗೆ ಚತುರವಚನದಿಂ ಸೂಚಿಪನದಱಿಂ ನಾಗರಿಕನೆನಿಪಂ—

ಲಕ್ಷ್ಯಂ.

ಚಂ|| ನಸುದೊಡೆ ತೋರ್ಪ ಪಟ್ಟಣಿಗೆಯೊಳ್ ನಿಱಿಗತ್ತರಿಬೊಟ್ಟು ಕಟ್ಟು ಬಿ|
ಟ್ಟಿಸೆವ ಕುರುಳ್ ಮೊಗಕ್ಕೆ ಪಿರಿದೊಪ್ಪುವ ಬಿಂಕದ ಸಂಕದೋಲೆ ಕು ||
ಪ್ಪಸ ದಳಮಾದ ಸಣ್ಣಬಳೆ ಕೆನ್ನೆಯ ಪೀಲಿಯನಾಂತ ಚೊಲ್ಲೆಯಂ |
ಮಿಸುಗುವ ದೋರೆವಲ್ ಕರಮೆ ಮಾಸರಮಾದುದು ದೇಸೆಗಾರ್ತಿಯಾ ||
(ಇದು ನಾಗರಿಕವಚನಂ)

ವ|| ಇಂತುಟಿದುವನಱಿದುಕೊಳ್ವುದು.

ವ|| ಇಂ ನಾಯಿಕಾವಿಕಲ್ಪಮುಂ ಪೇಟ್ವೆಂ.

ಸೂತ್ರಂ ೮೬.

ಕಂ|| ಪ್ರಕಟತರನಾಯಿಕೆಯರಾ |
ಸ್ವಕೀಯೆ ಪರಕೀಯೆ ಪಣ್ಯೆಯೆನೆ ಮೂಱುತೆಱಂ |
* ಸ್ವಕೀಯೆ ಪರಿಭಾವಿಸೆ ಮು |
ಗ್ಧೆ ಕವಿಗಳಿಂ ಮಧ್ಯೆ ತತ್ಪ್ರಗಲ್ಭೆಯುಮೆನಿಕುಂ ||

ಸೂತ್ರಂ ೮೭.

ಕಂ|| ಕ್ರಮದಿಂದ್ವಾದಶವರ್ಷ |
ಪ್ರಮಾಣದೊಳ್ ಮುಗ್ಧೆ ಮಧ್ಯೆ ತದ್ದ್ವಿಗುಣದೊಳಾ ||
ಸಮಕಟ್ಟಿಂ ತದ್ದ್ವಿಗುಣ |
ಪ್ರಮಿತಾಬ್ದದೊಳಾ ಪ್ರಗಲ್ಭೆಯೆನೆ ಪೆಸರ್ವಡೆಗುಂ ||

---

*ಕಂದಲಕ್ಷಣವು ಕೆಟ್ಟಿದೆ (ಜಗಣವು ವಿಷಮಗಣವಾಗಿದೆ) ಪ್ರಕಟಂ ಸ್ವಕೀಯೆಯೆಂಯುಂ ಮು|| (ಎಂದು ತಿದ್ದಬಹುದು)

ಸೂತ್ರಂ ೮೮.

ಚಂ|| ನವವಯಮೆಯ್ದೆ ಲಜ್ಜೆ ನವಕಾಮವಿವೃಂ ಸುಸಿಲಲ್ಲಿ ವಕ್ತ್ರಮಂ |
ಸವನಿಸದಾಕೆ ಮುಗ್ಧೆ ನಡುಜವ್ವನವೊಪ್ಪುವ ಕಾಮಮೋಹಮುಂ ||
ತವೆ ಸುಸಿಲಿಂ ಪೊದಲ್ದವಳೆ ಮಧ್ಯೆ ವಯೋಧಿಕೆ ತೀವ್ರಕಾಮದಿಂ |
ಬವರಿಪಳಾಪ್ರಗಲ್ಭೆ ವರಮೂರ್ಛಿತೆ ತತ್ಕಲೆವಲ್ಲಳಲ್ಲವೇ ||

ಲಕ್ಷ್ಯಂ.

ಚಂ|| ಪದಯಿಸೆ ಸೋಂಕಿ ಶಂಕೆಗಿಡೆ ಮೇಳಿಸಿ ಮೆಯ್ವಿಡೆ ತಳ್ತು ತೋಳ ತ |
ಳ್ವಿಡಿಗೊಳೆ ಮೆಲ್ಲನಪ್ಪಿ ಮೊಗವೆತ್ತಿಡೆ ಚುಂಬಿಸಿ ಸೋಲ್ತು ನಾಣನೊ ||
ಕ್ಕುದನಳಿದಿಚ್ಛೆ ಕಾರ್ತನದ ನಲ್ಮೆಗಳಿಂ ನುಡಿದಿಂತಲಂಪಿನು |
ಬ್ಬಿದಿಗಮುನಾಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್|| ೧೩೮||

ವ|| ಮತ್ತಂ.

ಚಂ|| ಇನಿಯನಗಲ್ದೊಡಂ ಸುರತದೊಳ್ ನೆರೆವುಜ್ಜುಗದಿಂದಮಿರ್ಪುದಾ |
ತನೊಳೊಡನಿರ್ದೊಡಂದೆನಗೆ ಪೋಪುದು ಲಜ್ಜೆಯೊಳಿರ್ದ ಪೊಟ್ತು ನ ||
ಲ್ಲನೊಳಿರಲೀಯದೆಂತುಮೆನಗೆನ್ನ ಮನಂ ಬಸಮಲ್ಲದೆಂದು ಕಾ |
ಮಿನಿ ಕುದಿವಳ್ ವಿಯೋಗದೊಳಮಾತನಯೋಗದೊಳಂ ನಿರಂತರಂ||೧೩೯||
(ಇವಳ್ಮುಗ್ಧೆ)

ಮ|| ಬಗೆಯೊಳ್ ಪೊಣ್ಮಿದಲಂಪು ಕಾತರತೆಯಂ ತಂದೀಯೆ ಮೆಯ್ ಮೆಯ್ಗೆಸಂ|
ದುಗಳೇನಪ್ಪೊಡಮಿಲ್ಲದಂತಮರ್ದಿನಂ ತಳ್ತಪ್ಪಿ ಬಾಯ್ಗೊಟ್ಟದೊಳ್ ||
ಮಿಗೆ ಪೀರ್ವಂತೆ ಮನೋನುರಾಗರಸಮಂ ಮುಯ್ವೆರ್ಚೆ ಕಾದಲ್ಮೆ ಕೆ |
ಯ್ಮಿಗುವನ್ನಂ ನೆರೆದರ್ ಮನಃಪ್ರಿಯತಮರ್ ನಾನಾರತಕ್ರೀಡೆಯಿಂ||೧೪೦||

ವ|| ಮತ್ತಂ.

ಮ|| ಇನಿಸಂ ತನ್ನನಗಲ್ದೊಡಂದೆ ಮರಣಾವಸ್ಥಾಂತರಂ ಪುಟ್ಟಿ ತೊ |
ಟ್ಟನೆ ಕಂಡಂದು ಭಯಾಕುಳಂ ಪದಪಿಸಿಂ ಮಾತಾಡೆಯುಂ ನಾಡೆ ಕೆ ||
ಮ್ಮನೆ ಬರ್ಕುಂ ಕಲಹಂ ಮನಕ್ಕೆ ತಣಿಪಿಲ್ಲೆಂದುಂ ಸುಸಿಲ್ಗೆಂದೊಡಾಂ |
ನಿನಗೇನೆಂದಪೆನಕ್ಕ ಕೂರ್ಪವರೊಳಿನ್ನೆಲ್ಲಿತ್ತೊ ಸೌಖ್ಯಾವಹಂ || ೧೪೧||
(ಇವಳ್ ಮಧ್ಯೆ)

ಮ|ಸ್ರ|| ಕುಟಿಲಾನೀಳಾಲಕಂಗಳ್ ನಿವಿರ್ದಿರೆ ಬೆಳರ್ವಾಯ್ ನಾಡೆಯುಂ ಬೀಗೆ [ರಾಗೋ |
ತ್ಕಟದೇಹಂ ರಾಗಮುಂ ಪಿಳ್ಳನೆ ಪಿಡಿದವೊಲಿಂಬಾಗೆ ನೀಳ್ಗೋಳಲಂಪಿಂ ||
ವಿಟವೃತ್ತಂ ಮೆಯ್ಯೊಳೆತ್ತಂ ಪಸರಿಸಿರೆ ವಿಟಂ ಬೀಸೆ ಸಿಂಧಿರ್ದಳೊರ್ವಳ್ |
ಸ್ಫುಟಿತೋರೋಮಧ್ಯೆ ಭಿನ್ನಾಳಕೆಯವಟುತಟಗ್ರಂಥಿನಿರ್ಗಂಥದಿಂದಂ||೧೪೨

ವ|| ಮತ್ತಂ,

ಮ|| ಅಳಕಂ ತುಂಬಿವೊಲಾಡೆ ತುಂಬಿದ ಕುಚಂ ಚಕ್ರಾಂಕದಂತಾಡೆ ಕ |
ಣ್ಣೆಳವಿಾನಾಟಮನಾಡೆ ಮುದ್ದುವೊಗಮಂಭೋಜಾತದಂತಾಡೆ ನೀರ್ ||
ತಿಳಿನೀರಂತೆ ತೊಳೆದಾಡೆ ನೂಪುರಮರಾಳೋನ್ಮಾದವಾದ್ಯಕ್ಕೆ ಪೂ |
ಗೊಳನೆದರ್ದಾಡುವ ವೋಲದೇಂ ಮೆಱೆದಳೋ ನಾನಾರತಪ್ರೌಢಿಯಂ||೧೪೩
(ಇವಳ್ ಪ್ರಗಲ್ಭೆ)

ವ|| ಅಲ್ಲಿ

ಸೂತ್ರಂ ೮೯.

ಕಂ|| ಧೀರೆಯೆನಿಕ್ಕುಂ ಧೈರ್ಯದೆ |
ಧೀರಾಧೀರೆಯೆ ಪೊದಳ್ದ ದೈರ್ಯಾಧೈರ್ಯಾ ||
ಧಾರದಿನಧೈರ್ಯದಿಂದವು |
ಧೀರೆಯೆ ತನ್ಮಧ್ಯೆಯುಂ ಪ್ರಗಲ್ಭೆಯುಮಕ್ಕುಂ ||

ವ|| ಮತ್ತಂ.

ಸೂತ್ರಂ ೯೦.

ಚಂ|| ನಗೆವೆರಸಿರ್ದ ತೊಂಡುನುಡಿಯಿಂ ತಗುಳ್ವಳ್ ಸಲೆ ಧೀರೆ ದೋಷಿಯಂ |
ಮಿಗೆ ಖತಿಯಾಂತು ಕೊಂಕುನುಡಿಯಿಂ ಪೊಡಳ್ದಶ್ರುವಿನಿಂ ಸದೋಷಿಯಂ ||
ತಗುಳ್ವಳಿ ಮಧ್ಯೆಯೆಂಬಪಸರಾಂತುಭಯಾಖ್ಯೆ ಕೃತಾಪರಾಧಿಯಂ |
ತಗುಳದೆ ಮೂಣ್ಪಳೆಯ್ದೆ ಬಿಱುವಾತಿನ ಜಾಲದಿನಸ್ತಧೀರೆ ತಾಂ ||

ಲಕ್ಷ್ಯಂ.

ಚಂ|| ಪೊಸಬನಿದಾವನಾದಪುದು ಕಂಡಱಿದಂತೆವೊಲೆಲ್ಲಿ ಕಂಡೆವೀ |
ರಸಿಕನನೆಂದು ಕಂಡ ತೆಱನಲ್ಲಿದು ತಾಂ ಬಱಿದೇಕೆ ಬಂದನೀ ||
ಬಿಸಿಲೊಳದೇಕೆ ಮೆಯ್ಯರಿಸಿನಂ ಪಿರಿದಕ್ಕಟ ತಲ್ತು ಬಾಸುೞಿಂ |
ಪಸಿಯವು ನೊಂದನೆಂದು ನುಡಿದಳ್ ತಡೆದೊಯ್ಯನೆ ಬಂದ ನಲ್ಲನಂ ||೧೪೪||
(ಇವಳ್ ಮಧ್ಯಾಖ್ಯೆಧೀರೆ)

ಮ|ಸ್ರ|| ಮುಳಿವೆಂ ತಾನಾರ್ಗೆ ತನ್ನಂ ತಿಳಿಪುವ ಪಿರಿದುಂ ದಂದುಗಂ ಬೇಡವಿನ್ನಾಂ|
ಮುಳಿಯೆಂ ನಿನ್ನಾಣೆ ನಿನ್ನೀನವನಖಹತಿಯುಂ ಕುಂಕುಮಾದ್ರಾಂಕಿ [ತೋರ||
ಸ್ಥಳಮಂ ಬೆಳ್ಪೇಱಿ ಸೊಪ್ಪಾದಧರಮನಿಸಿತುಂ ಕಂಡುಕಂಡಿನ್ನು ನಿ [ನ್ನೊಳ್ |
ಮುಳಿಸಿನ್ನೇಂ ಲಲ್ಲೆಯಿನ್ನೇಂ ಪುರುಡುಗಳೆನುತುಂ ತೀವಿದಳ್ ಕಣ್ಣ [ನೀರಂ|| ೧೪೫||
(ಇವಳ್ ಮಧ್ಯಾಖ್ಯೆಧೀರಾಧೀರೆ)

ಚಂ|| ಎಲೆ ಮೃಗನೇತ್ರೆ ಬೇಡ ಮುಳಿಸೆಂಬೆ ಯಿದೇಂ ಸಖಿ ಯಿತ್ತಲಾರೊ ಯೆಂ |
ಜಲಿಸಿದ ಬಾಯ ತೀವ್ರನಖಸಾತದ ಬಾಸುಱಿ ಮೆಯ್ಯ ದುಷ್ಟನಂ ||
ಖಲನಸಿದೆಂತು ನೋಱಿಪ್ಪಿನಿವನಂ ತಡೆವಂದವಿದೇಕೆ ಪೋಕೆ ತ |
ನ್ನೊಲವನವಳ್ಗೆ ತೋರ್ಕೆ ಬಿಡುಗೆಂದುಱಿದಳ್ ದಯೆಗೆಟ್ಟು ನಲ್ಲನಂ||೧೪೬||
(ಮಧ್ಯಾಖ್ಯಾಧೀರೆ)

ಸೂತ್ರಂ ೫೧.

ಚಂ|| ಮುಳಿದುಱಿ ಚಿಂತಿಸುತ್ತೆ ಕೃತದೋಷಿಯನೊಂದದಳುಂ ಬಱಿಕ್ಕವಂ |
ತಿಳಿಪುತೆ ಬಂದೊಡಂ ಮನಮನೀಯದಳುಂ ಸಲೆ ಧೀರೆ ಹಾಸ್ಯಮು ||
ಗ್ಗಳಿಸಿದ ಕೊಂಕುವಾತಿನುಭಯಾಖ್ಯೆಯ ತೋಱುವಳಾಸದೋಷಿಯೊಳ್ |
ತಿಳಿಪುವನಂ ಪ್ರಗಲ್ಭೆವೆಸರೊಪ್ಪಿದಧೀರೆಯೆ ಜವಿ ಪೊಯ್ವಳೀ ||

ಲಕ್ಷ್ಯಂ.

ಕಂ|| ಬೆರಲಂ ಮೂಗಿನಮೇಲಿ |
ಟ್ಟುರುಕೋಪದೆ ಸಾಪರಾಧಿಯಂ ವಲ್ಲಭನಂ ||
ತರುಣಿಯಣಂ ಪೊರ್ದದೆ ನಿಂ |
ದಿರವೇಂ ಕನ್ನಡಿಸಿದತ್ತೊ ಧೈರ್ಯದ ಪೆಂಪಂ || ೧೪೭||

ವ|| ಮತ್ತಂ.

ಕಂ|| ವಿನಯೋಪಚಾರವಚನಮು|
ಮನುಕೂಲಾಚರಣಮುಂ ವಿಭಿನ್ನಾಸನಮುಂ ||
ಇನಿಯಂಗಱಿಪದೆ ಸುರತ |
ಕ್ಕನಿತೊದವುವಳಲ್ತು ಮುಳಿದಳೆಂಬೊಂದಿರವಂ || ೧೪೮||
(ಇವಳ್ ಪ್ರಗಲ್ಭೆವೆಸರಧೀರೆ)

ಚಂ|| ಎಱಗಿದೊಡಾರ್ಗೆ ತಾನಸಮಸೌಖ್ಯಮನೀಗುಮೆ ಅಂತೆ ನೀನದ |
ಕ್ಕೆಱಗುವೆ ಕೆಮ್ಮನೆನ್ನಡಿಗೆ ಬಲ್ಲೆನಿದೆಲ್ಲಮನೆಲ್ಲು ಪೋಗು ನಿ ||
ನ್ನೆಱಕಮದೆತ್ತಲಿರ್ದುದಿರದತ್ತೆಱಗೆನ್ನ ಮನಕ್ಕೆ ಕೋಪಮಂ |
ನೆಱಿಯಿಸಬೇಡ ಪೋಗೆನುತವಳ್ ನಗೆಯಿಂ ಕೊಱಚಾಡಿ ಕಾಡಿದಳ್||೧೪೯||
(ಇವಳ್ ಪ್ರಗಲ್ಭೆವೆಸರಧೀರಾಧೀರೆ)

ಕಂ|| ಪುರ್ವಿಂದಪರಾಧಿಯನುಱ |
ಜರ್ವುತೆ ಕಲಕಾಂಚಿಯಿಂದೆ ಬಂಧಿಸಿ ಕಾಯ್ಪಿಂ ||
ದುರ್ವಿಂ ಬಯ್ದೊಡೆದು ಸದೆವಳ್ |
ಸರ್ವರ್ ಕೆಳದಿಯರೆ ಪಾಱೆವೇಱ್ವಿನವಿುನಿಯಳ್ || ೧೫೦||

ವ|| ಮತ್ತಂ.

ಚಂ|| ಸ್ಮರನಲರಂಬಿನೇಱುಗಳ ಬಾದಣದಿಂ ಪೊಱಮಟ್ಟು ಪೋದುದೋ |
ಸುರಿಸುರಿಬಾಷ್ಪದಿಂ ತೊಳೆದುಪೋದುದೊ ಸುಯ್ಯೆಲರಿಂದೆ ಪಾಱಿತೋ ||
ವಿರಹಕೃಶಾನುವಿಂದಮೆಲೆ ಬೆಂದುದೊ ಧೈರ್ಯವೊಡರ್ಚಿ ಚಿತ್ತದೊಳ್ |
ಬೆರಸಿ ಮದೀಯಕಾಂತನೆಡೆಗೈದಿತೊ ಕೇಳ್ ಸಖಿ ಕಾಣೆನೆನ್ನೊಳೇಂ || ೧೫೧||
(ಇವಳ್ ಪ್ರಗಲ್ಭಾಧೀರೆ)

ವ|| ಇನ್ನಲ್ಲಿ.

ಸೂತ್ರಂ ೯೨.

ಕಂ|| ಪ್ರಿಯನಿಷ್ಟದೆ ಜ್ಯೇಷ್ಠೆಯುಮ |
ಪ್ರಿಯದಿಂದೆ ಕನಿಷ್ಠೆಯಕ್ಕು ವಿೂಯಱುವರುಮಾ ||
ರಯೆ ತಾಂ ಪ್ರತ್ಯೇಕಂ ಮು |
ಗ್ಧೆಯನೊರ್ವಳನಿಲ್ಲಿಕೂಡೆ ಪದಿಮೂಱುತೆಱಂ ||

ಲಕ್ಷ್ಯಂ.

ವ|| ಜ್ಯೇಷ್ಠೆಕನಿಷ್ಠೆಗೆ.

ಕಂ|| ಪಿಂತನೆ ಬಂದಿರ್ವರ್ ನಿಜ |
ಕಾಂತೆಯರುಂ ಲೀಲೆಯಿಂದವಿರೆ ಕಾಂತಂತಂ ತಾ ||
ನಂತೊರ್ವಳ ಕಣ್ಮುಚ್ಚಿಯೆ |
ಸಂತಸದಿಂದೊರ್ವಳಧರಪಾನಂಗೆಯ್ದಂ || ೧೫೨||

ಚಂ|| ಎಲೆಮೃಗನೇತ್ರೆ ನೋಡು ನವಿಲಾಟಮನಾಸಹಕಾರಗುಚ್ಛಕೋ |
ಮಳಿಕೆಯನುದ್ಭ್ರಮದ್ಭ್ರಮರಲೀಲೆಯನೆಂದು ವನಾಂತರಾಳದೊಳ್ ||
ಚಳಮತಿಮಾಡಿ ವಲ್ಲಭೆಯನನ್ಯವಿಟೀಮುಖಚುಂಬನೇಪ್ಸಿತಾ |
ಕುಳನಭಿವಾಂಛೆಯುಂ ನೆಱೆಯೆ ತೀರ್ಚಿದನೇನುಚಿತಪ್ರವೀಣನೋ || ೧೫೩||

ವ|| ಇಲ್ಲಿಯಧರಪಾನಕ್ಕೆ ಬಂದವಳ್ ಜ್ಯೇಷ್ಠೆ, ಚುಂಬನಕ್ಕೆ ವಂದವಂ ಕುಟಿಲ ನಾಯಕಂ.

ಸೂತ್ರಂ ೯೩.

ಕಂ|| ಇನ್ನಾಪರಕೀಯೆಯೆ ತಾಂ |
ಕನ್ನಿಕೆ ಮೆಱೆವೂಡೆಯೆಂದುಮಿರ್ತೆಱನಕ್ಕುಂ ||
ಕನ್ನಿಕೆ ವಿವಾಹವಾಗದ |
ಳುನ್ನತದೆ ವಿವಾಹವಾದಳೂಢೆಯೆನಿಕ್ಕುಂ ||

ಲಕ್ಷ್ಯಂ.

ಮ|| ಸುರಭಿಸ್ವೀಕೃತಿ ಗೀತರಕ್ತಿ ಮಣಿಭೂಷಾಪೇಕ್ಷೆ ತಾಂಬೂಲರಾ |
ಗರಸಾಪೇಕ್ಷೆ ಕಟಾಕ್ಷವೀಕ್ಷಣೆ ರತಿವ್ಯಾಪಾರಮೆಂಬೀಮಹೋ ||
ದ್ಧುರಪಂಚೇಂದ್ರಿಯದರ್ಪವೊತ್ತರಿಸೆ ಕೆಯ್ಯಿಕ್ಕಿರ್ಪೊಡಿಂತೀತನೂ |
ದರಿ ಸಾಲ್ವಳ್ ತಳೆಯಲ್ ಸ್ವಯಂವರವರಪ್ರಸ್ಥಾನಮಾಂಗಲ್ಯಮಂ ||೧೫೪
(ಇವಳ್ ಕನ್ನಿಕೆ)

ಕಂ|| ತಿಳಕಮನೋಸರಿಸುವ ಕ |
ಜ್ಜಳಜಳಮಂ ತೊಡೆವ ಕುರುಳನೊತ್ತುವ ನೆವದಿಂ ||
ದೆಳಸಿ ಕಿಱುಕಿಱಿದು ಪೊಸಮದ |
ವಳಿಗೆಯ ಸಾಧ್ವಸಮನರಸನೊಯ್ಯನೆ ಕಳೆದಂ || ೧೫೫||

(ಇವಳ್ ಊಢಾನಾಯಿಕೆ)

ಸೂತ್ರಂ ೯೪.

ಕಂ|| ನೆಱೆಯ ಪರಕೀಯೆ ತಾನಿ |
ರ್ಪಱನೆಂಬುದನಱಿಯೆ ಪೇೞ್ದನಿನ್ನಱಿಗೆ ಬುಧರ್ ||
ಕುಱಿಪಂ ಪಣ್ಯೆಗೆ ಗುಣಗಣ |
ದೆಱಕಂ ಸಾಮಾನ್ಯಮಪ್ಪುದಱಿನೊಂದೆ ತೆಱಂ ||

ಲಕ್ಷ್ಯಂ.

ಚಂ|| ಮುಳಿವ ಕನಲ್ವ ಕಂಟಿಸುವ ಕಾಡುವ ಬೇಡುವ ಮೇಕುದೋರ್ಪ ಸಾ |
ರ್ದಳಸುವಟಿಲ್ವ ಗೆಲ್ವ ಬಗೆದೋರ್ಪ ಮನಂಗುಡದಿರ್ಪ ಕೈತವಂ ||
ಗಳೊಳಿವಳಾವಗಂ ಹರಯಮಿಲ್ಲದೆ ಮೋಹಿಸುತಿರ್ಪಳಿನ್ನಿವಳ್ |
ಮೊಳೆಯೊಳೆ ಕೊಂದು ಕೂಗಿದಪಳೇೞಿಲೆವ್ರೋದೊಡೆ ಬಾೞಿಲೀವಳೇ||೧೫೬

(ಇವಳ್ ಪಣ್ಯೆ)

ಸೂತ್ರಂ ೯೫.

ಕಂ|| ಇಂತಱಿಯೆ ಪೇೞ್ದ ಪದಿನಾ |
ಱುಂತೆಱದಾವಧುಗಳೊಳಗೆ ಯೋರೊರ್ವರವ ||
ಸ್ಥಾಂತರಮದೆಂಟು ಭೇದಮ ||
ದಂತೆನೆ ತಱಿಸಂದು ಪೇೞ್ವೆನೆನ್ನಱಿವನಿತಂ ||

ಸೂತ್ರಂ ೯೬.

ಕಂ|| ಸುಕವಿಗಳಿಂ ಸ್ವಾಧೀನಪ |
ತಿಕೆ ಗತಭರ್ತಾರಿಕೆಯಭಿಸಂಧಿತೆ ಯಭಿಸಾ ||
ರಿಕೆ ವಿರಹೋತ್ಕಂಠಿತೆ ವಾ |
ಸಕಸಜ್ಜಿಕೆ ವಿಪ್ರಲಬ್ಧೆ ಖಂಡಿತೆಯೆನಿಕುಂ ||

ಸೂತ್ರಂ ೯೭.

ಕಂ|| **ಸತತಂ ಸ್ವಾಧೀನಪತಿಕೆ** |
ಪತಿಯುಂ ಸ್ವಾಧೀನಮಾಗಿ ತಡೆದಂಗನೆ ತಾಂ ||
**ಗತಭರ್ತಾರಿಕೆ** ಯೆನಿಕುಂ |
ಪತಿ ಪರದೇಶಸ್ಥನಾಗೆ ಮಱುಗುವ ನಲ್ಲಳ್ ||

ಲಕ್ಷ್ಯಂ.

ಉ|| ಪೊಲ್ಲಮೆಗಂಡವರ್ ಮುಳಿದು ತಮ್ಮಯ ತೋಱಿರಸಂತುಮಾಱಿಪ್ಪೊಡಂ |
ನಲ್ಲದ ಲೋಗರಂ ಬೆಸಸು ನಿನ್ನಯ ಪಾನುಪದಪ್ರಘಾತಮುಂ ||
ನಲ್ಲಳೆ ಕೋಪದಿಂದನಗೆ ನೀಂ ದಯೆಗೆಯ್ವೊಡೆ ನೋಗುಮೆಂದನೀ |
ಮೆಲ್ಲಡಿಯೆನ್ನ ಮೆಯ್ಯ ಪುಳಕಂಗಳಿನೆನ್ನ ಕುರುಳ್ಗಳೊತ್ತಿನಿಂ || ೧೫೭||
(ಇವಳ್ ಸ್ವಾಧೀನಪತಿಕೆ

ಚಂ|| ಘನಸಮಯಕ್ಕೆ ಬರ್ಪೆನೆನೆ ತಾಂ ಬರಪಾಱುತುಮಿರ್ಪುದೆಂದು ಮೆ |
ಲ್ಲನೆ ಪಲವಂದದಿಂ ನಲಿಸಿ ಮತ್ಪತಿ ಪೋಗೆ ಒಱಿಕ್ಕಮೇನೊ ತೊ ||
ಟ್ಟನೆ ನಭದೊಳ್ ಕಱಂಗಿ ಮುಗಿಲುಂ ನೆಗೆದರ್ಪುವು ನಲ್ಲನೇಕೆ ಬಾ |
ರನೊ ಪಿಂಗೆ ತಱ್ತು ಕೇಗಿದಪುವೆನ್ನದರ್ ಪವ್ವನೆ ಪಾಱಿಕೇಕಿಗಳ್ ||೧೫೮||
(ಇವಳ್ ಗತಭರ್ತಾರಿಕೆ)

ಸೂತ್ರಂ ೯೮.

ಕಂ|| ಅಡಿಗೆಱಗಿದನಿಯನಂ ಕಿಡೆ |
ನುಡಿದಟ್ಟಿ ಬಱಿಕ್ಕೆ ನೋವಳ**ಭಿಸಂಧಿತೆ** ಪೇ ||
ರಡಪಿಯಿರುಳ್ ಪಗಲೆನ್ನದೆ |
ಬಿಡದೆಯ್ದುಗುವೋಪನಲ್ಲಿ**ಗಭಿಸಾರಿಕೆ** ತಾಂ ||

ಲಕ್ಷ್ಯಂ.

ಚಂ|| ವಿನಮಿತನಾದನಲ್ಲನುಮನೊಲ್ಲದೆ ಚೇಟಿಯರಾಗಳಕ್ಕ ನೀಂ |
ಮುನಿಸನೆ ಮಾಣ್ಬುದೆಂದೊಡದುವಂ ಬಗೆಗೊಳ್ಳದೆ ಮಾಣ್ದು ಮತ್ತೆ ತಾಂ ||
ಮುನಿಸನೆ ತಾಳ್ದಿದೆಂ ಮುನಿಸೆ ತಾಪನಿಬಂಧನಮಾದುದಲ್ಲದಿಂ |
ದೆನಗೆ ಲತಾಂತವಿಮಲಯಜಂ ನಸಿ ತುಂಬಿಗಳುಂತು ಕಾಯ್ದುಮೇ ||೧೫೯
(ಇವಳಭಿಸಂಧಿತೆ)

ಚಂ|| ಬಱಿಸಿಡಿಲೇೞಿರ್ಗೆ ಸುತ್ತಿಱಿವ ಕಟ್ಟಲೆ ಕಾರ್ಮುಗಿಲೊಡ್ಡು ಬಂದು ಬಂ |
ದೆಱಗುವ ಬಲ್ಲಿತಪ್ಪ ಸರಿ ಕಣ್ಗೆಳೊಳುಳ್ಕುವ ಮಿಂಚು ಮಾಣದ ||
ಯ್ಕಱಿ ಗಜಱುತ್ತುಮಿರ್ಪ ಘನಘರ್ಜನೆ ಯೆಂಬಿವು ಕಾತರತ್ವಮಂ |
ಮಱಿಯಿಸಲೆಂದುಮಾಱುವು ನಿಜೇಶ್ವರನಲ್ಲಿಗೆ ಪೋಪ ನಲ್ಲಳಾ ||	೧೬೦||

(ಇವಳಭಿಸಾರಿಕೆ)

ಸೂತ್ರಂ ೯೯.

ಕಂ|| ವಿರಹೋತ್ಕಂಠಿತೆ ಪತಿ ತಡೆ |
ದಿರವಿಂಗತಿದುಃಖಮುಳ್ಳವಳ್ ತನ್ನಂ ಮಂ ||
ದಿರಮುಂ ವಾಸಕಸಜ್ಜಿಕೆ |
ಪುರುಷನ ಬರವಱಿದು ಸಿಂಗರಂಗೆಯ್ವುಲಕ್ಕುಂ ||

ಲಕ್ಷ್ಯಂ.

ಮ|| ಇನಿಯಂ ಬಾರದೆ ನಿಂದನೇಕೆ ಗಡ ಪೊೞ್ತುಂ ಪೋದುದಿಂತೆಂದು ಕಾ |
ಮಿನಿ ತನ್ನಾಸೆ ನಿರಾಸೆಯಾಗೆ ಬಿಸುಸುಯ್ದುೞ್ತರ್ತ ಬೇಸತ್ತು ಕ ||
ಣ್ಬನಿಯಂ ಸೂಸಿ ಕನಲ್ದು ತೊಟ್ಟ ತೊಡವಂ ಬೀಸಾಡಿ ಪೂಮಾಲೆಯಂ |
ಮುನಿಸಿಂದಂ ಪಱಿದಿಟ್ಟು ಕಾಂತೆ ನೊಡರಂ ನಿರ್ವೇದದಿಂ ಬೀಸಿದಳ್||೧೬೧||

(ಇವಳ್ ವಿರಹೋತ್ಕಂಠಿತೆ)

ಚಂ|| ಮನೆಯುಮನೆಯ್ದೆ ತನ್ನುಮನಲಂಕರಿಸಿರ್ದು ನಿಜಪ್ರಿಯೋಪಗಾ |
ಹನದೃಢಗಾಢಕರ್ದಮವಿಲೇಪನಮೆಂದು ವಧೂಟಿ ಗಂಧಸಾ ||
ವನಮೃಗನಾಭಿಚರ್ಚನಮನೊಲ್ಲದೆ ಮಾಣ್ದಳದಂತೆ ಕಾಂತೆ ಕಾಂ |
ತನೊಳೊಡಗೂಡಿದರ್ಪಳವಲೇಪನೆನಿಪ್ಪುದು ತಕ್ಕುದೆನ್ನಿರೇ ||	೧೬೨||

(ಇವಳ್ ವಾಸಕಸಜ್ಜಿಕೆ)

ಸೂತ್ರಂ ೧೦೦.

ಕಂ|| ಬೆಸಸಿದೆಡೆಗೆಯ್ದೆ ಪಡೆಯದೆ |
ರಸಿಕನನತಿದುಃಖೆ ವಿಪ್ರಲಬ್ಧೆಯ ನಲ್ಲಂ ||
ಸುಸಿಲಂಕಮನನ್ಯೆಯಿನಾಂ |
ತೆಸೆದಿರೆ ಕಂಡೀರ್ಷ್ಯೆಗೆಯ್ವ ಪೆಣ್ ಖಂಡಿತೆ ತಾಂ ||

ಲಕ್ಷ್ಯಂ.

ಉ|| ನೂತವಿಹಂಗಸಂಕುಳಸಮುನ್ನತನಾದಮನೆಯ್ದೆ ಕೇಳ್ದು ಕಾ |
ಮಾತುರೆ ನಲ್ಲನಾಯಡೆಯೊಳಿರ್ದನೆಗೆತ್ತಿರದೆಯ್ದೆ ಬಂದು ಸಂ ||
ಕೇತನಮಾಧವೀಸದನದೊಳ್ ನಿಜಕಾಂತನ ರೂಹುಗಾಣದು |
ತ್ಪಾತವಿಷಾದೆ ಬೆಚ್ಚನುಸಿರ್ದೊತ್ತಿದಳೊಯ್ಯನೆ ಕಣ್ಣ ನೀರ್ಗಳಂ || ೧೬೩||

(ಇವಳ್ ವಿಪ್ರಲಬ್ಧೆ)

ಮ|| ಇನಿತಂ ನಂಬೆಲೆ ಮನ್ಮನೋರಮಣಿ ನಿನ್ನೆನ್ನಂದಮಂ ನೋಡಿಬ್ಪೋಡೀ |
ತನು ಬೇಱಲ್ಲದೆ ಜೀವವೊಂದೆ ತಮಗೆಂಬೀಮಾತೆ ಕೇಳೀಗಳೋ ||
ಪನೆ ಪೋ ನಿಶ್ಚಯಮಾದುದಲ್ಲದೊಡೆ ನಿನ್ನೀವೆುಯ್ಯೊಳೊಂದಿರ್ದ ನೂ |
ತನರಕ್ತಾರ್ದ್ರನಖಕ್ಷತವ್ಯಥೆಗೆ ಪೇಱಿನ್ನೀಮನಂ ನೋಗುಮೇ || ೧೬೪||

(ಇವಳ್ ಖಂಡಿತೆ)

ವ|| ಮತ್ತಮಿಂತು ನೂರಿಪ್ಪತೆಂಟುತೆಱದ ಭೇದದ ನಾಯಿಕೆಯರಲ್ಲಿ ಪ್ರತ್ಯೇಕ
ಮಾಗಿ ಮೂಱೆಱನಕ್ಕುಮದೆಂತೆಂದೊಡೆ.

ಸೂತ್ರಂ ೧೦೧.

ಕಂ|| ಕ್ರಮದಿಂದೆ ವಚನಕೋಪ |
ಪ್ರಮೋದದಿಂ ಪ್ರಕೃತಿಗುಣವಿಭೇದದಿನಱಿಗು ||
ತ್ತಮನಾಯಿಕೆಯಂ ನೆಱಿ ಮ |
ಧ್ಯಮನಾಯಿಕೆಯುಂ ಜಘನ್ಯತರನಾಯಿಕೆಯುಂ ||

ಸೂತ್ರಂ ೧೦೨.

ಮ|ಸ್ರ||ಮೃದುವಾಕ್ಕೋಪಪ್ರಸಾದಂ ಸಹಜಮೆನಿಸಿದಾಕಾಂತೆ ತಾನುತ್ತಮಾಖ್ಯಾ|
ಸ್ಪದೆ ರಕ್ತಾರಕ್ತಮಾಗಲ್ ಮುಳಿಸು ಪಿಷಮುಸಂಧಾನಪಿನ್ನುಳ್ಳವಳ್ ಮಾ|
ರ್ಗದೊಳಕ್ಕುಂ ಮಧ್ಯಮಾಖ್ಯೋನ್ನತೆ ಮುಳಿಸದೆ ಕಾಯ್ವುದು ಕೂರ್ಪೊರಂ|
ಬಿಡಿಗೊಂಡಾತ್ಮೇಶನಂ ಮೇಳಿಸುವ ಚಪಲೆ ತಾಂ ಜಘನ್ಯಾಖ್ಯೆಯಲ್ತೆ ||

ಲಕ್ಷ್ಯಂ.

ಕಂ|| ಮನ್ಮನದಾಣ್ಮನೆ ನಿನ್ನಯ |
ಸನ್ಮಾನಂ ಜಾಣ್ಮೆ ಜವ್ವನಂ ಸಿರಿ ವಿಭವಂ ||
ಮನ್ಮಥರೂಪತೆ ಸೊಬಗುಂ |
ಸನ್ಮಾಧುರ್ಯತೆಯನೆನಗೆ ಪುಟ್ಟಿಪುವಸಿಶಂ || ೧೬೫||

(ಇದುತ್ತಮನಾಯಿಕಾವಚನಂ.)

ಚಂ|| ಬಿನದಮದೆಂತೆನಂದಮೆರ್ದೆಗೊಳ್ವುಪಚಾರಮದೆಂದಿನಂದದಿಂ |
ಬಿನ ನುಡಿ ಯೆಂದಿನಂದವಱಿಪೋಡದ ನೋಟಮದೆಂದಿನಂದಮೆಂ ||
ಬಿನವಿರದಾಗಳುಂ ಬಿಡದ ಸುಯ್ಯೆಲಗೊರ್ಯ್ಯನೆ ಬಂದು ಮೆ |
ಲ್ಲನೆ ಪೆಱಪಿಂಗುವಾಱಡಿಯ ದೂಱಿದುದೋಪನೊಳಾದ ಕೋಪಮಂ||೧೬೬

(ಇದುತ್ತಮನಾಯಿಕಾಕೋಪಂ)

ಮ|| ಮುಳಿಸೇಂಕಾರಣವೆನ್ನೊಳಿಲ್ಲ ಮತಿವಾಕ್ಕಾರುಣ್ಯದಿಂದೋಪ ನ |
ಲ್ಲಳ್ ನೀಂ ನಿನ್ನಯ ತೋಱುತ್ತಿನಿಂತು ಬೆಸಸಲ್ ಪೋ ತಕ್ಕುದೇ ಮಾಣ್ಬುದೀ ||
ಕಳುಷಾಲಾಪವ ನೆಂದು ಕಾಲ್ವಿಡಿದನಂ ಕರ್ೂತಿ ತ್ತಿ ಬಾಷ್ಪಾಂಬುಕ |
ಜ್ಜಳಪಂಕಾಂಕಿತಸಾಂದ್ರವೃತ್ತಕುಚದೊಳ್ ತಳ್ತಪ್ಪಿದಳ್ ಕಾಂತನಂ||೧೬೭

(ಇದುತ್ತಮನಾಯಿಕಾಪ್ರಸಾದಂ)

ಕಂ|| ಮನದೊಳ್ ಕಪಟಮನಱಿಯದೆ |
ನಿನಗೊಲ್ದಳನೆನ್ನನಿಂತು ತೊಱುತ್ತಿಂಬವೊಲೊ ||
ಯ್ಯನೆ ನೆಗಟ್ದಪೆ ನಿನ್ನೀ ನಾ |
ಯ್ತನಮುಂ ಮಾಣ್ ಮಾಣದಂದು ಪೊಸಪರಿಮಾಱಿಪ್ಪಿಂ || ೧೬೮||

(ಇದು ಮಧ್ಯಮನಾಯಿಕಾ ವಚನಂ)

ಚಂ|| ಅರುಣಿಮನೇತ್ರಮುದ್ಗ್ರಭ್ರುಕುಟಿಭಂಗಮತಿಸ್ಫುರಿತಾಧರಂ ನಿರಂ |
ತರಮತಿಕಂಪಿತಸ್ತನ ತನೂದರಮುದ್ಗತಘರ್ಮಬಿಂದು ನಿ ||
ರ್ಭರ ಸರಸೋಕ್ತಿಯಾಕುಳತೆಯೊಳ್ ರಮಣಂಗೆ ಪೊಡಟ್ಟಿ ಚೆಲ್ವನಾ |
ಳ್ದಿರ ಮುನಿದಳ್ ಮನಂಬುಗೆ ವಿನೂತನಸಭ್ರುಸಭಂಗಭೀತಿಯಿಂ || ೧೬೯||

(ಇದು ಮಧ್ಯಮನಾಯಿಕಾಕೋಪಂ)

ಚಂ|| ನಡುಗೆ ಪಯೋಧರಂ ಪೊಡರೆ ಬಾಯ್ದೆಱೆ ಮಿಳ್ಳಿಸೆ ಪುರ್ವು ಕೆಂಪನಾ |
ಳ್ದೊಡರಿಸೆ ಕಣ್ಗಳುಣ್ಮೆ ಬೆಮರಾದಮೆ ಕಂಡು ಭಯಾರ್ತಮೂರ್ತಿ ಕಾ ||
ಲ್ವಿಡಿಯೆ ಕೃತಾಪರಾಧಿ ನಿಜನೂಪುರದೊಳ್ ತೊಡರ್ದೊಳ್ಗುರುಳ್ಗಳಂ |
ಬಿಡಿಸುವ ಕೆಯ್ತದಿಂ ಮೆಱೆದಳಾವಿಭುಗಂ ವಧು ತನ್ನ ನಲ್ಮೆಯಂ || ೧೭೦||

(ಇದು ಮಧ್ಯಮನಾಯಿಕಾಪ್ರಸಾದಂ)

ಚಂ|| ನುಡು ನುಡು ಪೋಗೆನೆಂಬೆನಿರಬಾರದು ಪೋದೊಡೆ ನೋಡೆನೆಂಬೆನೆಂ |
ದೊಡೆ ನಯನಂಗಳಂತಿರವು ನೋಡಿದೊಡಂ ನಗದಿರ್ಪೆನೆಂಬೆನೆಂ |
ದೊಡೆ ನಗೆ ನಿಲ್ಲದಾ ನಗೆಯೊಳಾನವನೊಳ್ ಪುದುವಾೞೆನೆಂಬೆನೆಂ |
ದೊಡೆ ಬಗೆ ಮೇಲೆ ಪಾಯ್ದಳಿಸಿ ತಾನೆ ಕಡಂಗುವುದೇವೆನಾಂ ಸಖೀ || ೧೭೧||

(ಇದು ಜಘನ್ಯನಾಯಿಕಾವಚನಂ)

ಚಂ|| ನುಡಿದೊಡೆ ಚುನ್ನಮಂ ನುಡಿದಳೆಂದಪೆ ನಾಣಿಲಿ ಮಾಣಲಾಗದೇ |
ತುಡುಗುಣಿಗೆಯ್ತಮಂ ನಿನಗೆ ಮಾಣ್ದೊಡೆ ಸತ್ತಪೆ ನಿನ್ನನೆಂತು ಸೈ ||
ತಿಡುವೆನೊ ಸಂದ ಱೋಡಗನೆ ಎಂದು ಕರಂ ಮುಳಿಸಿಂ ಕನಲ್ದು ಕ |
ಣ್ಕಿಡೆ ಕಡುಕೆಯ್ದು ಪೊಪ್ಪನೊವಡಪ್ಪಿನೆಗಂ ಬಡಿದಳ್ ನಿಜೇಶನಂ ||೧೭೨||

(ಇದು ಜಘನ್ಯನಾಯಿಕಾಕೋಪಂ)

ಚಂ|| ಮುಳಿದಿರೆ ನಲ್ಲನೋಪಳ ಪದಾಂಬುರುಹಕ್ಕೆ ವಿನಮ್ರನಾಗೆ ಚಾ |
ಪಳ ಮೊಱೆಯಲ್ತು ನೀನೆನಗೆ ಮುಟ್ಟದೆ ಪೋಗೆನೆ ಪೋಗೆ ಕಂಡು ಸಂ ||
ಚಳಮತಿ ನಿಂದು ಸೈರಿಸದೆ ಬೆಂಬೞಿಯಿಂ ಪರಿದೆಯ್ದೆ ಮೇಲುದಂ |
ಸೆಳೆದೊಡೆ ನಲ್ಲನೊಲ್ಲದಿರ ಕಾಲ್ವಿಡಿದುಯ್ದಳತಿಪ್ರಮೋದದಿಂ || ೧೭೩||

(ಇದು ಜಘನ್ಯನಾಯಿಕಾಪ್ರಸಾದಂ)

ಸೂತ್ರಂ. ೧೦೩.

ಕಂ|| ನೀನಱಿದೆಣಿಸುವೊಡಾದುದು |
ಮೂನೂಱೆಂಭತ್ತು ನಾಲ್ಕು ಭೇದಂ ಪೆಸರ್ವೆ ||
ತ್ತಾನಾಯಿಕಾವಿಕಲ್ಪಂ |
ಭೂನುತಕವಿನಿಕರರಚಿತಕಾವ್ಯಾದಿಗಳೊಳ್ ||

ವ|| ಮತ್ತಮಿದೊಂದುಮತದಿನೀತಾದುದು. ಅವರ ಗುಣಗಣಮನೋವೃತ್ತಿ ಚೇಷ್ಟಾದಿಗಳಿಂ ನಾಯಿಕಾಭೇದಮಗಣಿತಂ, ಅವರ್ಗೆ.

ಸೂತ್ರಂ. ೧೦೪.

ಕಂ|| ನುತಸಖಿ ಲಿಂಗಿನಿ ಧಾತ್ರಿಕೆ ।
ಪ್ರತಿವೇಶಿನಿ ದಾಸಿ ಚಾರು ಶಿಲ್ಪಿನಿ ಕಾಂ ||
ತೆ ತರದೆ ದೂತಿಯರಕ್ಕುಂ ।
ಸತತಂ ಸ್ವಾಧೀನೆಯಾದಿಗಿವರ ಸಹಾಯರ್ ||

ವ|| ಇದರ್ಕೆ ಸನ್ಮತಿ ವಚನಂ.

ಶ್ಲೋ|| ದೂತೀ ದಾಸೀ ಸಖೀ ಚೈವ ಧಾತ್ರೇಯೀ ಪ್ರಾತಿವೇಶಿನೀ ।
ಯೋಗಿನೀ ಶಿಲ್ಪಿನೀ ಸಾಚ ಸಹಾಯಾಷ್ಟ ಪ್ರಕೀರ್ತಿತಾಃ ||

ಸೂತ್ರಂ. ೧೦೫.

ಕಂ|| ಇವರಂ ಪ್ರಿಯನರ್ದಡೆಗಾ ।
ಯುವತಿಯರಟ್ಟುವರೊಱಲ್ದು ಕಾರ್ಯನಿಮಿತ್ತಂ ||
ಇವರಂ ಕಳಿಪದೆ ಸಲೆ ತಾ ।
ನೆ ವಲ್ಲಭನ ಬಳಿಗೆ ಪೋಪಳಭಿಸಾರಿಕೆ ದಲ್ ||

ವ|| ಇಂತಪ್ಪನಾಯಿಕೆಯರ್ಗೆ ಸಖಿಯರೇೞುಮಂದಿ. ಅವರವರ ಗುಣಬುದ್ಧಿ ಸಂಧಾನಕೌಶಲ್ಯನುಡಿಗಳನಂತಂ. ಅದಱಿಂ ಸಖಿಸಖೀವಚನಂಗಳ್ ಅಖಿಳ ಕಾರ್ಯದೊಳ್ ಸುಲಭಂ.

ಲಕ್ಷ್ಯಂ.

ವೃ|| ಎನಗೇಕಾದುದೊ ಬೆಂದರೂಪೆಸೆವರೂಪಿಂಗೇಕೆ ಪಾಲಿಱಾದ ಜ ||
... ವ್ವನವಿೂಜವ್ವನದಲ್ಲಿ ಕೂರದನ ಬೇಟಂ ಬೇಟದೊಳ್ ಕಾಯ್ವ ಚಂ ||
ದ್ರನ ಕಾಟಂ ಕಟಿವಂದಮಾವುದೆನಗಿನ್ನೇನೆಂದೊಡಾನಂದೆನಂ ।
ಗನೆ ನೀಂ ಗರ್ವಿಸಿದಪ್ಪೆಯೆಂದುಬಗೆದೋಱಿಂ ನಲ್ಲನೇನೊಲ್ಲನೇ || ೧೭೪||

ವ|| ಇಂತಱಿವುದು.

## ಗದ್ಯ

ಇದು

ಶತೇಂದ್ರ ಮುನೀಂದ್ರ ವಂದಿತಾರ್ಹತ್ಪರಮೇಶ್ವರ
ಪಾದಾರವಿಂದಾ ಮಂದಮಕರಂದಾನಂದಿತ

ಭೃಂಗಾಯಮಾಣ

ಕವಿಸಾಳ್ವ

ವಿರಚಿತಮಪ್ಪ

ರಸರತ್ನಾಕರದೊಳ್

ನಾಯಕನಾಯಿಕಾವಿವರಣಂ

ತೃತೀಯಪ್ರಕರಣಂ

ಶ್ರೀ

# ವ್ಯಭಿಚಾರಿಭಾವವಿವರಣಂ.

## ಚತುರ್ಥಪ್ರಕರಣಂ.

---

ಕಂ|| ಶ್ರೀಯಂ ರಸವತ್ಕವಿತಾ |
ಶ್ರೀಯಂ ತಳೆದಿಂದುಕುಂದಕರ್ಪೂರಯಶ ||
ಶ್ರೀಯಂ ಪೆತ್ತಂ ಭವ್ಯ |
ಪ್ರಾಯಂ ಪರಹಿತದೆ ಬಾಳ್ವನೀ ಕವಿಸಾಳ್ವಂ || ೧೭೬||

ವ|| ವಿದ್ಯಾನಾಥನ ಮಾರ್ಗದಿಂ ಭಾವೋದಯ ಭಾವಶಾಂತಿ ಭಾವಸಂಧಿ ಭಾವಶಬಲತ್ವ (ಭಾವ) ಸ್ಥಿತಿಗಳ್ಗೆ.

ಸೂತ್ರಂ ೧೦೫.

ಕಂ|| ಪಸರಿಪ ಭಾವದುದಯ ಶಾಂ |
ತಿ ಸಂಧಿ ಶಬಲತೆಗಳೆಂದು ಪರಿವರ್ತಿಸುಗುಂ ||
ಪೆಸರದಱುದಯದೆ ಶಾಂತಿಯಿ |
ನೆಸೆವೆರಡಱ ಸಂಧಿಯಿಂ ಬಹುತ್ವದೆ ಸಿದ್ಧಂ ||

ಲಕ್ಷ್ಯಂ.

ಚಂ|| ಪರಿವಿಡಿಗೆಯ್ಯೆ ತೊಂಡುಗಿಳಿ ತಂದೆಯ ತಾಯ ಸಮೀಪದೊಳ್ ತನೂ |
ದರಿಯ ರತೋಪಯುಕ್ತರುತಮಂ ವಿನತಾನನೆ ನಾಣ್ಚಿ ತಾಳತ ||
ತ್ಪರತಿಶುನರ್ತನಪ್ರಹತಕಂಕಣಝುಂಕೃತಹಸ್ತತೂರ್ಯನಿ |
ರ್ಭರರವದಿಂದದಂ ಮಱಸಿದಳ್ ಗಡ ಮುಗ್ಧೆಯದೇಂ ವಿದಗ್ಧೆಯೋ ||
(ಇಲ್ಲಿ ಲಜ್ಜಾಭಾವೋದಯಂ)

A—10

ಮ|| ಸತಿ ಕೇಳ್ ನೀಂ ರತಿ ನಲ್ಲನೊಪ್ಪುವಲರ್ವಿಲ್ಲಂ ಪ್ರೇಮದಿಂ ಶರ್ಕರಾ |
ಮೃತದೊಳ್ಗೂಡಿದವೋಲ್ ನಿಮತ್ತು ಸವಿಗೂಟಂ ಪಿಂಗೆ ಕಾಮಾಗ್ನಿಗಾ ||
ಹುತಿಯುಪ್ಪಂದಮದಲ್ತೆ ಗಾವಿಲರ ಕೃತ್ಯಂ ಕಾಲ್ಗೆ ಬಿೞ್ದಿರ್ದ ಭೂ |
ಪತಿಯಂ ಮೇಳಿಸು ಬೇಡ ಕೋಪಮೆನೆ ಕೇಳ್ದೊಲ್ದಪ್ಪಿದಳ್ ಕಾಂತನಂ||
(ಇಲ್ಲಿ ಭಾವಶಾಂತಿ)

ಕಂ|| ಇದಿರೊಳ್ ಪುಲಿ ಗರ್ಜಿಸಿ ಸಿಲೆ |
ಬೆದಱಿ ಕರಂ ಶಬರಿ ಬರಿಯನಪ್ಪಲೊಡಂ ಕೋ ||
ಪದಿನಲರ್ದುದೊಂದು ಕಣ್ ರಾ |
ಗದಿನಲರ್ದುದದೊಂದು ಕಣ್ ವನೇಚರಪತಿಯಾ || ೧೭೯||
(ಇಲ್ಲಿ ರೋಷಹರ್ಷದಸಂಧಿ)

ವ|| ಮತ್ತಂ.

ಕಂ|| ನಂದನನೊಸಗೆಯು ಮಾಮಕ |
ರಂದಕ ನೆಳಸಿರದೆ ಬಿಟ್ಟು ಪೋದೊಂದಱಲುಂ ||
ಕುಂದದೊಡವೆರಸೆ ಸತಿ ಕಾ |
ಳಿಂದಿಯ ಸುರನದಿಯ ಕೂಡಲಂ ಪೋಲ್ತಿರ್ದಳ್|| ೧೮೦||
(ಇಲ್ಲಿ ಹರ್ಷವಿಷಾದ ಸಂಧಿ)
(ಇವು ಭಾವಸಂಧಿಗಳ್)

ಮ|ಸ್ರ|| ಎಲರಿಂದೆೞ್ಚತ್ತು ಲೀಲಾವತಿ ನಿಜಪತಿಯಂ ಮಂಚದೊಳ್ ಕಾಣದಾಗಳ್ |
ಚಲೆಯಾದಳ್ ಮೂರ್ಛೆವೋದಳ್ ಮಱೆದಳೊಱಗಿದಳ್ ಕಂದಿದಳ್ ಕುಂದಿದಳ್ ಕೋ |
ಟಲೆಗೊಂಡಳ್ ಸಾವುಗಂಡಳ್ ಕಳವಳಿಸಿದಳಾಸತ್ತಳೆೞ್ತಳ್ ಬೆಮರ್ತಳ್ |
ನೆಲೆಯಿಂದಂ ಬಿೞ್ದಳೆೞ್ದಳ್ ವಿರಹದುರಿಯ ಸಂತಾಪದಿಂ ಭ್ರಾಂತೆಯಾದಳ್|| ೧೮೧ ||

(ಇಲ್ಲಿ ಬೋಧೆ ಮತಿ ಚಪಲತೆ ಮೋಹಂ ಜಡತೆ ನಿದ್ರೆ ಗ್ಲಾನಿ ಮೊದಲಾದ ಸಂಚಾರಿಗಳಪ್ಪುದಱಿಂ ಭಾವಶಬಲತ್ವಂ).

ವ|| ಭಾವದ ನಿಲವೇ ಭಾವಸ್ಥಿತಿ.

ಲಕ್ಷ್ಯಂ.

ಮ|| ತಣಿವುಂಟೇ ಪೆಱದೊಂದಪೂರ್ವರಸಮಂ ಕೆಯ್ಕೊಟ್ಟಿಮೇ ಮತ್ತಮಾ |
ವುಣಿಸಾ ತಂಬುಲ ಮಾವಿದಗ್ಧಗಣಿಕಾಸಂಭೋಗಮಾ ವಸ್ತ್ರಭೂ ||
ಷಣಮಾಲ್ಯಾದಿಗಳೆಂದೆ ಪಂಬಲಿಪೆ ನಿಚ್ಚಂ ನಿಚ್ಚವಿೂ ಪಿಷ್ಟಪೇ |
ಷಣ ವಿೂಚರ್ವಿತಚರ್ವಣಂ ಸುಖಮದೇಂ ನಿನ್ನಂ ಮರುಳ್ಮಾಡಿತೋ ||೧೮೨||
(ಇದು ವಿತರ್ಕದ ಸ್ಥಿತಿ)

ವ|| ಇಂತಯ್ದುವಿಧಂ ವ್ಯಭಿಚಾರಿಗಳ್ ಪ್ರತ್ಯೇಕಮೆಂದಱಿವುದು.

ವ|| ಇನ್ನಾವ್ಯಭಿಚಾರಿಗಳಂ ಪೇೞ್ವೆಂ.

ಸೂತ್ರಂ. ೧೦೬.

ಮ|ಸ್ರ|| ಮತಿಲಜ್ಜಾವೇಗಶಂಕಾಮರಣಚಪಲತಾಹರ್ಷನಿರ್ವೇದದೈನ್ಯ |
ಸ್ಮೃತಿಮೋಹಾಲಸ್ಯಗರ್ವಶ್ರಮಮದಜಡತಾಗ್ಲಾನಿಸಂಸುಪ್ತಿನಿದ್ರಾ ||
ಧೃತಿತರ್ಕೋನ್ಮಾದಬೋಧಾಮಯಭಯಸವಿಷಾದೋತ್ಸುಕಾಮರ್ಷ
ಚಿಂತಾ |
ಸತತಾಸೂಯಾವಹಿತ್ಥೋಗ್ರಕವಿಲಸದಪಸ್ಮಾರಕಾಖ್ಯಾನದಿಂದಂ ||

ಸೂತ್ರಂ. ೧೦೭.

ಕಂ|| ಸಮನಿಸಿ ಗಣಿಸಿದ ಮೂವ |
ತ್ತುಮೂಱು ಸಂಚಾರಿ ಭಾವತತಿಗಾಂ ಪೇೞ್ವೆಂ ||
ಕ್ರಮದೆ ವಿಭಾವಮನನುಭಾ |
ವಮನೊಪ್ಪುವ **ಹೇಮಚಂದ್ರಸೂರಿಯ** ಮತದಿಂ ||

ಸೂತ್ರಂ ೧೦೮.

ಕಂ|| ನೆಗಱ್ದ **ವಿಭಾವಂ** ವ್ಯಭಿಚಾ |
ರಿಗೆ ಕಾರಣಮಾಯ್ತು ಕಾರ್ಯಮನುಭಾವಂ ಸೈ ||
ತೊಗೆದನುಭಾವದೆ ಸಂಚಾ |
ರಿಗಳಂ ವರ್ಣಿಸಿದರಾದ್ಯರೆಂತೆನೆ ಪೇೞ್ವೆಂ ||

ವ|| ಅಲ್ಲಿಯಾದಿಮಾರ್ಗದಿಂ **ವ್ಯಭಿಚಾರಿ** ಮೂವತ್ತುಮೂಱುಂ **ಸಂಧುಧು.** ಬೇಱಿಲ್ಲಂ. **ದಂಭಂ** ಗರ್ವದೊಳವಹಿತ್ಥದೊಳುದ್ವೇಗಂ **ನಿರ್ವೇದ**ದಲ್ಲಿ,

ಕ್ಷುತ್ತೃಷ್ಣಾದಿ ಗ್ಲಾನಿಯೊಳಂತರ್ಭಾವಂ, ಅಂತೆ ಪೆಱತೊಳವೆಂದೊಡವಿೂ ಮೂವತ್ತುಮೂಱರೊಳವರ್ಪುವು. ಅಲ್ಲಿ ಲಕ್ಷಣಮಂ ವಾಕ್ಯಮಾಗೆ ವಿಭಾವಾನುಭಾವಂಗಳಂ ಪೇೞ್ದಪೆನದಱಿಗೆ.

ಕ್ರಮಲಕ್ಷಣಂ.

೧-ವ|| ಅರ್ಥನಿಶ್ಚಯಮೇ ಮತಿ.

ಸೂತ್ರಂ. ೧೦೯.

ಕಂ|| ಶ್ರುತಚಿಂತನಾನಯಾಭ್ಯು |
ನ್ನತಬುದ್ಧಿ ಪದಾರ್ಥಬೋಧೆಯೆ ವಿಭಾವಂ ತ ||
ನ್ಮತಿಗೆ ಸಲೆ ಸಂದೆಗಮನ |
ಟ್ಟೆ ತತ್ವಮಂ ತಿಳಿದ ನಿಲವೆ ಸಂದನುಭಾವಂ ||

ಲಕ್ಷ್ಯಂ.

ಮ|| ಕಿಡಲೆಂದಿರ್ಪುದು ದೇಹಮೆಲ್ಲತೆಱದಿಂ ಕೇಡಿಲ್ಲ ಜೀವಕ್ಕೆ ಮ |
ತ್ತೊಡಲಜ್ಞಾನಿ ಸುಬೋಧದೃಗ್ಬಳಮೆ ಮೆಯ್ ಜೀವಕ್ಕೆ ದೋಷಂಗಳಿ ||
ರ್ಪೆಡೆ ದೇಹಂ ಗುಣರತ್ನವಿರ್ಪ ನಿಳಯಂ ಜೀವಂ ದಲಂದಿಂತು ನೋ |
ೞ್ಪೊಡಮನ್ಯೋನ್ಯವಿರುದ್ಧಮೆಂತು ತನುವಂ ನೀಂ ನಚ್ಚಿದಯ್ ಜೀವನೇ ||

ವ|| ಮತ್ತಂ.

ಮ|| ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೀಂ|
ದ್ರಮಹೈಶ್ವರ್ಯಮಿವೆಲ್ಲ ಮಧ್ರುವಮಿವಂ ಬೇೞ್ಪಂತು ಬೇಡೊಲ್ಲೆನು||
ತ್ತಮದೀಕ್ಷಾವಿಧಿಯಂ ಸಮಾಧಿಮರಣಂ ಕರ್ಮಕ್ಷಯಂ ಬೋಧೆ ಲಾ |
ಭಮುಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀವಧೂವಲ್ಲಭಾ ||೧೮೪||
(ಇದು ಮತಿ)

೨-ವ|| ಮತ್ತೀ ಚಿತ್ತಸಂಕೋಚಮೆ ಲಜ್ಜೆ-

ಸೂತ್ರಂ ೧೧೦.

ಕಂ|| ಛಲಭಂಗಮಕಾರ್ಯಕರಣ |
ಮಲಂಘ್ಯರಂ ಮಿಗುವುದಾದಿಯೆ ವಿಭಾವಂ ತಾಂ ||
ಸಲೆ ಲಜ್ಜೆಗೆ ವೈವರ್ಣ್ಯಂ |
ತಲೆಗುತ್ತಿ ಪೆವರವುದಾದಿ ಸೆಗಳ್ದನುಭಾವಂ ||

ಲಕ್ಷ್ಯಂ.

ಚಂ|| ನವವಧು ನಲ್ಲಸಿತ್ತಧರನೀಲತೆಯಂ ಮುಕುರಾಂಗದಲ್ಲಿ ನೋ |
ಡುವ ಪದದಲ್ಲಿ ನೋಡುತದನಾತನೆ ನಿಂದಿರೆ ಪಿಂತೆ ಬಂದು ಕಂ ||
ಡವನತಕಂಠಿ ಕಯ್ನುಡಿಯನೊಳ್ಳುಗುರಿಂ ಬೆರಟುತ್ತೆ ಬೆಳ್ಮೊಗಂ |
ಸಮನಿಸೆ ಕಾಲ್ವೆರಲ್ ಬರೆಯೆ ಭೂಮಿಯನಿರ್ದಳದೊಂದು ಚೆಲ್ವಿನಿಂ ||

(ಇದು ಲಜ್ಜೆ)

೩-ವ|| ಸಂಭ್ರಮುಮ ಆವೇಗಂ.

ಸೂತ್ರಂ ೧೧೧

ಕಂ|| ವಾತಾಗ್ನಿವರ್ಷಗಜಮು |
ತ್ಪಾತಂ ಪ್ರಿಯವಿಪ್ರಿಯ ಶ್ರವಣತಾವ್ಯಸನಂ ||
ಈತೆಱದೆ ವಿಭಾವಂ ವಿ |
ಖ್ಯಾತಾವೇಗಕ್ಕೆ ಪೇೞ್ವೆನನುಭಾವಮುಮಂ ||

ಸೂತ್ರಂ ೧೧೨.

ಕಂ|| ಮುಸುಕು ಪೊಗೆಸುತ್ತು ಹೊದಕೆಗ |
ಳಸದೃಶ ದೊಲವಿಕೆ ವಿಚಿತ್ರಪುಳಕವಿಲಾಸ ||
ಪ್ರಸರಂ ಸನ್ನಾಹನವಿಂ |
ತೆಸೆವಾವೇಗಕ್ಕೆ ತರದಿನನುಭಾವಂಗಳ್ ||

ಲಕ್ಷ್ಯಂ.

ಕಂ|| ಕಾೞ್ಕಿಚ್ಚು ತಗುಱೆ ತನ್ನೊಳ್ |
ಕೋೞ್ಮುಟ್ಟೆ ವನದ್ವಿಪೇಂದ್ರಚಯವತಿಭಯದಿಂ ||
ನೀೞ್ಕಿರಿಸಿ ನಿಲ್ಲದಲ್ಲಿಯೆ |
ನಾೞ್ಕಡೆ ವೋಪಂತು ಪೋದುದಾನಗತಟದೊಳ್ || ೧೮೬||

(ಇದಗ್ನಿಯಿಂದಾದಾವೇಗಂ)

ಕಂ|| ಗುಡಿಗಟ್ಟುವ ಕಡೆಯಿಕ್ಕುವ |
ಸೊಡರ್ವೆಳಗುವ ತೋರಣಂದಗುಳ್ಚುವ ಚಳೆಯಂ ||
ಗುಡುವ ಸಿರಿಗಂಪುವಡೆವಲ |
ರ್ದೊಡರ್ಚುವಮರಿಯರ ಕೆಯ್ತ್ತಮಚ್ಚರಿಯದಱಿತೊಳ್ || ೧೮೭||
(ಇದು ಸ್ವಾಮ್ಯಾವೇಗಂ)

ಕಂ|| ಏಳಿದಗೆಯ್ಯಲಿ ನೆವ್ಮೊ |
ಳ್ಳಾಳನುವೊಳ್ಗುದುರೆಯಂ ರಥಮುಮಂ ರಿಪುಹೃ ||
ದ್ವ್ಯಾಳಮುಮಂ ಸಮುಕಟ್ಟಿಂ |
ಕಾಳೆಗಕಂ ಪೋಗಿ ತಡೆದುಮಿಪ್ಪೊಡಯುಕ್ತಂ || ೧೮೮||
(ಇದು ವ್ಯಸನಾವೇಗಂ)

ವ|| ಇನ್ನು ಱಿದುವನಿಂತಱಿವುದು.

೪-ವ|| ಶಂಕಿಪುದೆ ಶಂಕೆ.

ಸೂತ್ರಂ ೧೧೩.

ಕಂ|| ಪರದಾರಾದಿವಿರುದ್ಧಾ |
ಚರಣಂ ಶಂಕೆಗೆ ವಿಭಾವಮೆಡಬಲನೋಟಂ ||
ಸ್ವರಮುಖವರ್ಣವಿಭೇದಂ |
ವರಮುಖಕಂಠಾಷ್ಠಶೋಷಮಿವನುಭಾವಂ ||

ಲಕ್ಷ್ಯಂ.

ಮ|ಸ್ರ|| ಮೊಲೆವಿಣ್ಪಿಂ ಬಳ್ಕುತುಂ ಮೆಲ್ಲನೆ ಪದವಿಡುತುಂ ನೀಳ್ದಪಾಗಂಗಳಿಂದಿ |
ರ್ಕೆಲನಂ ನೋಡುತ್ತುಮೆತ್ತಂ ಸುಳಿವ ನೆಲಲನಾರ್ಕೈವುತುಂ ದೂರದಿಂ ಬ||
ರ್ಪುಲಿಪಂ ಕರ್ಣಾವತಂಸಕ್ಕೆಳಸುವಳಿಗಳಂ ಸೋವಿ ನಿಂದಾಲಿಸುತ್ತುಂ |
ಚಲವೇಣೀಭಾರದಿಂದೋಸರಿಸುವ ಮುಸುಕಂ ಸಾರ್ಚುತುಂ ಪಾರ್ಶ್ವಪೋ
ದಳ್ || ೧೮೯ ||
(ಇದು ಶಂಕೆ)

೫-ವ|| ಮ್ರಿಯಮಾಣತ್ವಮೆ ಮೃತಿ.
ವಿಚಾರಂ—ಮರಣದ ಪೂರ್ವಾವಸ್ಥೆಯೇ ಮರಣಂ, ಮೇಲೆ ಅನುಭಾವವಿಲ್ಲ.

ಸೂತ್ರಂ ೧೧೪.

ಕಂ|| ಉರಗಾದ್ಯಭಿಘಾತಂ ಮೇಣ್ |
ಜ್ವರಾದಿ ರೋಗಂ ಮೃತಿಗೆ ವಿಭಾವಂ ಪೂರ್ವ ||
ಕ್ಷುರುಹಿಕ್ಕಾಫೇನಂಗಳ್ |
ಶರೀರಕಂಪಂ ಕೃಶತ್ವ ವಿಂತನುಭಾವಂ ||

ವ|| ಮತ್ತಂ ದಾಹಾಂಗಭಂಗಜಡತಾದಿಯುಮಕ್ಕುಂ. ಇನ್ನಾ ವ್ಯಾಧಿಗೆ ಶ್ವಾಸಾಂಗಭಂಗಾಕ್ಷಿವಿಘೂರ್ಣನ ಹಿಕ್ಕಾದಿ ಯನುಭಾವಂ.

ಲಕ್ಷ್ಯಂ.

ಮ|| ನೊರೆ ಬಾಯಿಂ ಪೊಱಸೂಸೆ ಕುಂಬಱನ ಚಕ್ರಂಬೋಲ್ ಭರಂಗೆಯ್ದು ಕಣ್ |
ತಿರುಗುತ್ತೊಂದಿರೆ ಪೆತ್ತ ಜೀರ್ಕೊಳವಿವೋಲ್ ಮೂಗೊತ್ತೆ ರಕ್ತಾಂಬುವಂ||
ಬರಿವೊಯ್ಲುರ್ವೆ ನಿಮಿರ್ಚೆ ಬಿಕ್ಕುಳಿಕೆ ಮೆಯ್ ಮುಯ್ವಾಗೆ ಕಂಪಕ್ಕೆ ಡಲ್ |
ಕುರುರಾಯಂ ಗದೆವೊಯ್ಲಿನಿಂದಿಳೆಗೆ ಬಿಟ್ಟಂ ಚಟ್ಟುಬಿಟ್ಟಂದದಿಂ|| ೧೯೦||
(ಇದು ಮರಣಂ)

ವ|| ಸಾಕ್ಷಾನ್ಮೃತಿಗೆ.

ಲಕ್ಷ್ಯಂ.

ಚಂ|| ಅರೆಮುಗಿದಿರ್ದ ಕಣ್ಮಲರ್ಗಳುಂ ನಿಮಿರ್ದೆತ್ತಿದ ಕೂನುಗಯ್ಯುಮಾ |
ಸುರದರೆಗರ್ಚಿದೌಂಡುವೆರಸನ್ಯಭಟಾಳಿಶರಪ್ರಹಾರಜ ||
ರ್ಝರಿತಶರೀರನಾಗಿ ನವಲೋಹಿತವಾರ್ಧಿಯೊಳಟ್ಟಿ ಬಿಟ್ಟನಂ |
ಕುರುಪತಿ ನೋಡ್ದಿ ಕಂಡನಭಿಮನ್ಯುಕುಮಾರನನಾಜಿರಂಗದೊಳ್|| ೧೯೧||
(ಇಲ್ಲಿ ನಿರ್ವಿಕಾರಮನುಭಾವಶೂನ್ಯಂ)

೬-ವ|| ಚಿತ್ತಂ ಚಲಿಪುದೆ **ಚಾಪಲ್ಯಂ.**

ಸೂತ್ರಂ. ೧೧೫.

ಕಂ|| ರಾಗದ್ವೇಷೇರ್ಷ್ಯಾದಿ ವಿ |
ಭಾಗಂ ಚಪಲತೆಗೆ ನೆಱೆ ವಿಭಾವಂ ಬಿಱುವಾ ||
ತಾಗಳ್ ಬಯ್ವುದು ಝುಂಪೋ |
ದ್ಯೋಗಂ ಕಟ್ಟುವುದು ಮೊದಲಿವನುಭಾವಂಗಳ್ ||

ಲಕ್ಷ್ಯಂ.

ಮ|| ಮನದನ್ನಂ ಮುಳಿಸಂ ಕಳಲ್ಚಿ ಬರುತಿರ್ಪೊಂದಂದಮಂ ಕಂಡು ಕಾ।
ಮಿನಿ ಪೊನ್ನುಯ್ಯಲನಾಡುತುಂ ಕೆಳದಿಯಂ ನುಣ್ಪಿಂದೆ ಬಯ್ವುತ್ತೆ ಕೆ||
ಮ್ಮನೆ ಸುಯ್ಗೆಯ್ದುವ ಭೃಂಗಮಂ ಪಿಡಿದ ಲೀಲಾಪದ್ಮದಿಂ ಪೊಯ್ವುತೋ।
ಪನನೇಂ ನೋಡದವೋಲಿರುತ್ತೆ ಚಪಳತ್ವಸ್ವಾಂತಮಂ ತಾಳ್ದಿದಳ್|| ೧೯೨||

ವ|| ಮತ್ತಂ.

ಮ|| ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾ।
ರವಝುಂಕಾರಿತಚಾರುವಾಮಚರಣಾಘಾತಂ ಚಲದ್ಭ್ರೂಲತಾ ||
ಗ್ರವಿಭಾಗೋತ್ಕಟತರ್ಜನಂ ತರಳತಾತಾಮ್ರಾಧರಂ ಚಕ್ರಿಗಿ।
ತ್ತುವಲಂಪಂ ಪ್ರಣಯಪ್ರಕೋಪಸುರತಪ್ರಾರಂಭದೊಳ್ ಕಾಂತೆಯಾ ||
(ಇದು ಚಪಲತೆ)

೭-ವ|| ಚೇತಃ ಪ್ರಸಾದಂ ಹರ್ಷಂ.

ಸೂತ್ರಂ ೧೧೭.

ಕಂ|| ಭೋಗಾದಿಲಾಭ ಪತಿಬಂ।
ಧ್ವಾಗಮಭರ್ತೃಪ್ರಸಾದಮಾದಿ ವಿಭಾವಂ ||
ಏಗಳ್ ಮುಖಪ್ರಸಾದಸು।
ಯೋಗಂ ಪುಳಕಾದಿ ಹರ್ಷಕಾದನುಭಾವಂ ||

ಲಕ್ಷ್ಯಂ.

ಚಂ|| ಕಡವಲರ್ದಂತೆ ಕಂಟಕಿತಮಾಗಿರೆ ಮೆಯ್ ಸರುಜಂ ರಸಾಯನಂ।
ಬಡೆದವೊಲಾಗೆ ತಾಂ ಪೊದೆದ ಮೇಲುದಱಿಂ ಗುಡಿಯಂ ತೊಡರ್ಚಿ ದಾಂ||
ಗುಡಿವಿಡೆ ಹರ್ಷವೊಂದು ಪೊಱಿಯೇಱಿದನಿತ್ತಜಿತಂಜಯಂ ಮನ।
ಕ್ಕೊಡರಿಸದಾರ್ಗೆ ರಾಗದೊದವಂ ಪಡೆದುಂ ಪ್ರಿಯಬಂಧುಸಂಗಮಂ ||
(ಇದುಹರ್ಷಂ)

೮-ವ|| ಸ್ವಾವಮಾನರೂಪಂ ನಿರ್ವೇದಂ.

ಸೂತ್ರಂ ೧೧೭.

ಕಂ|| ರೋಗಂ ದರಿದ್ರಮಿತ್ರವಿ |
ಯೋಗಂ ನಾನಾವಮಾನನಾದಿ ವಿಭಾವಂ ||
ಮೇಗಂ ನಿರ್ವೇದಂ ಕೇ |
ಡಾಗಳ್ ಸುಯ್ಘೋಷಮಿಂತಿವನುಭಾವಂಗಳ್ ||

ಲಕ್ಷ್ಯಂ.

ಮ|ಸ್ರ|| ಜರೆ ಬಂದೊಟ್ಟೈಸೆ ಮಾಣ್ದಿರ್ದಳಿಪನಗಿದೆ ಮುಂ ಸಾಲದೇ ಕಾಲರಾಜಂ |
ಬರೆಯುಂ ಮಾಣ್ದಿರ್ಪನೇ ನಿಶ್ಚಯಿಸಿ ತನುವನೀನೊಪ್ಪುಕೊಳ್ ಮುನ್ನ ಮಿನ್ನುಂ||
ಕರಣೀಯಂ ನಿನ್ನ ವಾಕ್ಯಂ ನಿಜಮತಮೆ ಮತಂ ಮೆಚ್ಚಿದಂತೆನ್ನ ನೀಂ ಸಂ |
ಸರಣಾಂಭೋರಾಶಿಯಿಂದಂ ಪೊಱಮಡಿಸೆನಗಂ ನೀನೆ ಹಸ್ತಾವಲಂಬಂ ||

ವ|| ಮತ್ತಂ.

ಕಂ|| ಕಷ್ಟಂ ದುಃಖಾನಲಸಂ |
ಪುಷ್ಟಂ ಚಿಃ ಗತಿಚತುಷ್ಟಯಂ ಪ್ರಾಣಿಗೆ ಸಂ ||
ತುಷ್ಟತೆಯನೆಯ್ದೆ ಪಡೆಗುಮ |
ಭೀಷ್ಟಪ್ರದವೊಂದೆ ನೋಡೆ ಮುಕ್ತಿಸ್ಥಾನಂ || ೧೯೬||

ವ|| ಮತ್ತಂ.

ಕಂ|| ಪರಿಜನಫಳವತ್ಕ್ಷೇತ್ರೋ |
ತ್ಕರಬಂಧುಜನಾಳಿಭವನಮುಹುಳಾವಳಿಯಂ ||
ಬುರುತರಪವರ್ಗಚಿಂತಾ |
1 ಪರಿಣತನಪವರ್ಗಚಿಂತೆಯುಂ ಮಾಡುಗುಮೇ || ೧೯೭||

(ಇದು ನಿರ್ವೇದಂ)

೯-ವ|| ಅನಾರಾಜಸ್ಯಮೇ ದೈನ್ಯಂ

1 ಪರನಪವರ್ಗಪ್ರಚಿಂತೆಯುಂ ಮಾಡುವನೇ,

ಸೂತ್ರಂ ೧೧೮.

ಕಂ|| ಆದಂ ಹೃತ್ತಪದಾರ್ಗ।
ತ್ಯಾಧಿಯ ದೈನ್ಯಕೆ ವಿಭಾವಮಂತಾಮುಸುಕಿಂ ||
ಬಾಧ ಮೃಜಾತ್ಯಾಗಂ ಮೆ ।
ಯ್ಯಾದುನ್ನತಭಾರದೈನ್ಯವಾಗನುಭಾವಂ ||

ವ। ಇಲ್ಲಿ ಆದಿಶಬ್ದಮಿಲ್ಲೆಂದೆನವೇಡ.

ಲಕ್ಷ್ಯಂ.

ಉ|| ನಿನ್ನಯ ಕೂಟಮಂ ಬಯಸೆ ಪೆತ್ತವಳೆಂತುಮೊಡಂಬಡಳ್ ದಿಟಂ ।
ನಿನ್ನ ಮನಕ್ಕೆ ಮಾಡುದದು ದೈವಕೃತಂ ದೊರೆಕೊಂಡುದಾದೊಡಂ ||
ಮನ್ನಿಪುದೆನ್ನ ಕಾರಣದಿನಿತ್ತಣ ಪಂಬಲನೀಕೆ ಮಾಡದಂ ।
ತಿನ್ನಡೆಯಿಪ್ಪುದೊಂದೆ ತೆಱನಪ್ಪುದಿದಂ ಸೆಱಗೊಡ್ಡಿ ಬೇಡದೆಂ || ೧೯೮||

(ಇದು ದೈನ್ಯಂ)

೧೦-ವ|| ಸ್ಮರಣಮೆ ಸ್ಮೃತಿ.

ಸೂತ್ರಂ ೧೧೯.

ಕಂ|| ವಿತತಸುಖದುಃಖಹೇತು ।
ಸ್ಮೃತಿ ಸದೃಶಾರ್ಥೇಕ್ಷಣಾದಿಯು ವಿಭಾವಂ ತಾಂ ||
ಸ್ಮೃತಿಗೆಸೆಗುಂ ತಲೆ ನಡುಕಂ ।
ಗತಿಶೂನ್ಯಾಲೋಕನಾದಿ ಮೆಱೆವನುಭಾವಂ ||

ಲಕ್ಷ್ಯಂ.

ಕಂ|| ಮನಕಂ ಪಕ್ಕಲ್ಲದ ನೆಲೆ । ·
ಗಿಸಿಸಾನುಂ ಮೆಚ್ಚಿ ಕರ್ಣನಂ ನೋಡಿ ನರಂ ||
ನೆನೆದಂ ತನ್ನೊಳ್ ತಾಗಿದ ।
ಪಿನಾಕಪಾಣಿಯ ಕಿರಾತತನುಸಾಹಸ್ಸವಮಂ || ೧೯೯||

(ಇದು ಸ್ಮೃತಿ)

೧೧-ವ|| ಚಿತ್ತಮೂಢತ್ವಂ ಮೋಹಂ.

ಸೂತ್ರಂ ೧೨೦.

ಕಂ|| ಭಯಮತ್ಸರವೈರಪಿಶಾ |
ಚಯೋಗಮುಖ್ಯಂ ವಿಭಾವಮಾವೋಹಕ್ಕಾ ||
ರಯೆ ತನುಘೂರ್ಣನಸರ್ವೇಂ ||
ದ್ರಿಯವೋಹಂ ಭ್ರಮಣಮಾದಿ ನೆಗಳ್ದನುಭಾವಂ ||

ಲಕ್ಷ್ಯಂ.

ಚಂ|| ಉಸಿರೆಲರೊಯ್ಯನೊಯ್ಯನೊಳಸಾರ್ದಡಗುತ್ತಿರೆ ಲೋಚನದ್ವಯಂ |
ನಸುಮುಗಳ್ದಶ್ರು ಪೊಣ್ಮದಿರೆ ಹಸ್ತಪದಂಗಳುಮಿರ್ದುಮಿರ್ದವೋಲ್ |
ಮಿಸುಕದೆ ಪೋಗುಗೆಟ್ಟಿರೆ ತದಂತರದೊಳ್ ಬಿಡಬಾಮನಂ ವಿಡಂ |
ಬಿಸಿದುದು ಮೂರ್ಛೆಯಾರುಮನದಿರ್ಪದು ಪುತ್ರವಿಯೋಗವಿಕ್ಲಬಂ ||೨೦೦||

ವ|| ಮತ್ತಂ.

ಮ|| ಉರಿಗಣ್ಣಿಂ ನನೆವಿಲ್ಲನಂ ತಿಸುಳಿ ಸುಟ್ಟಂದಾಗಳೆಯ್ತಂದು ತ |
ತ್ಸ್ಮರದೇಹಾಕೃತಿಯಿಂದೆ ಭಸ್ಮವಿರೆ ಕಂಡಾಲಿಂಗಿಸಲ್ ಬೀಟಿತೆ ಶೋ |
ಕರಸಾವೇಶದೆ ಮೂರ್ಛೆವೆತ್ತು ರತಿ ತಾಂ ಪಂಚೇಂದ್ರಿಯೋನ್ಮೋಹದಿಂ |
ದಿರೆ ಲೇಸಾದುದಿದೀಕೆಗೆಟ್ಟಿಱು ವಿಷಂ ತಾವೆಂದರಾಪ್ರೇಕ್ಷಕರ್ || ೨೦೧ ||
(ಇದು ವೋಹಂ)

ವ|| ಸುಖಜನ್ಮದಿಂ **ವೋಹ**ಮುಂಟು.

ಲಕ್ಷ್ಯಂ.

ಉ|| ನಲ್ಲರ ಕೂಟದೊಂದು ಪರಿಯುಂ ಪರಿಭಾವಿಸುತಿರ್ಪ ಕಾಂತೆಯರ್ |
ಬಲ್ಲಿದರಕ್ಕ ಬಂದು ಪತಿ ಸೋಂಕೆ ಮನಂ ಮರುಳಾಗಿ ಲೀಲೆಯಿಂ ||
ದೆಲ್ಲಿಗೆ ಪೋದೆನೇನನೊಸೆದಾಡಿದೆನೇನೆನುತಿರ್ದನೆಂಬುದಂ |
ಬಲ್ಲೊಡೆ ಕಾಮನಾಣೆ ರತಿಯಾಣೆ ವಸಂತಕನಾಣೆ ಕೇಳ್ ಸಖೀ || ೨೦೨||

ವ|| ಮತ್ತಂ.

ಚಂ|| ತೆಱಿ ಪರಿದೋಃಪನಷ್ಟಿದೊಡೆ ಮೆಯ್ಮಱಿವಪ್ಪುಸಡಿಲ್ದುದರ್ಕೆ ಮೆ |
ಯ್ಯಱಿವ ಪೊದಟ್ದು ಬಾಯುರಿಗೆ ಮೆಯ್ಮಱಿವಂತದು ಮೆಲ್ಲಿತಾಗೆ ಮೆ ||
ಯ್ಯಱಿವ ಜವಂಜವಂಗೆಡಿಸಿ ಮೆಯ್ಮಱಿವಾಸನಪಲ್ಲಟಕ್ಕೆ ಮೆ |
ಯ್ಯಱಿವೆಡೆ ಸಾವ ಪುಟ್ಟುವೆಡೆಯಾದುದುವಳ್ಗೆ ರತಾತಿರೇಕದೊಳ್ || ೨೦೩||

(ಇವು ಮೋಹಂ)

೧೨-ವ|| ಪುರುಷಾರ್ಥದಲ್ಲಿಯನಾದರಮೆ ಆಲಸ್ಯಂ.

ಸೂತ್ರಂ ೧೨೧.

ಕಂ|| ಶ್ರಮರೋಗಗರ್ವವಹನಾ |
ದ್ಯಮದಲ್ತೆ ವಿಭಾವಮಕ್ಕುಮಾಲಸ್ಯಕೆ ತಂ ||
ದ್ರಮುಖಿಳಕರ್ಮದ್ವೇಷಾ |
ಕ್ರಮನಿದ್ರಾಶಯನಮಂತಿವನುಭಾವಂಗಳ್ ||

ಲಕ್ಷ್ಯಂ.

ಚಂ|| ಪೊಲೆಗೆ ವಿಚಿತ್ರಪತ್ರಲತೆ ದುರ್ವಹಮೆಂಬ ವಿಲೋಚನಕ್ಕೆ ಕ |
ಜ್ಜಲರುಚಿ ಭಾರಮೆಂಬ ತನುಲೇಖೆಗೆ ಚಂದನವಣ್ಪು ಬಿಣ್ಣಿತೆಂ ||
ಬಲಸಪದಕ್ಕಲಕ್ತಕರಸಂ ಪೊಱೆಯೆಂಬಿಸಿತೊಂದು ಚಿತ್ತಮಂ |
ಲಲಿತೆಗೆ ದೇವಕೀವನಿತೆಗಾದುದು ಕೃಷ್ಣನ ಗರ್ಭದೇಳ್ಗೆಯೊಳ್ || ೨೦೪||

ವ|| ಮತ್ತಂ.

ಚಂ|| ಅಸಿತಪಯೋಧರಾನನಮುಪಾತ್ತವಿಜೃಂಭಣಮುನ್ಮುಖಂ ಸಮು |
ಲ್ಲಸಿತಜಡತ್ವಮುಚ್ಛ್ವಸಿತಬಂಧುರಗಂಧಸಮೀರಣಂ ಮನ ||
ಕ್ಕೆಸೆದುದು ಕಾರುಮಂ ಪೊಸಬಸಂತಮುಮಂ ನೆಱೆ ಪೋಲ್ತುದೊಲ್ದು ಭಾ|
ವಿಸೆ ಮದವನ್ಮರಾಳಮೃದುಯಾನೆಯ ನಿರ್ಭರಗರ್ಭವಿಭ್ರಮಂ ||೨೦೫||

(ಇಂತಾಲಸ್ಯಂ)

೧೩-ವ|| ಪರರನವಜ್ಞೆಗೆಯ್ವುದೇ ಗರ್ವಂ.

ಸೂತ್ರಂ ೧೨೨.

ಕಂ|| ಕುಲವಿಭವರೂಪಯೌವನ |
ಬಲವಿದ್ಯಾಪ್ರಭೃತಿ ಗರ್ವಕೆ ವಿಭಾವಂ ಕಾ ||
ಯ್ದುಲಿವು ಪರಿಹಾಸರೋಷಂ |
ಸಲೆ ಲೋಚನಗಾತ್ರವಿಕೃತಿಯಿಂತನುಭಾವಂ ||

ಲಕ್ಷ್ಯಂ.

ಮ|ಸ್ರ|| ಇರದೆಂಟುಂ ದಿಗ್ಗಜಂಗಳ್ ನೆರೆದಿರದಿದಿರೊಳ್ ತಾಂಗೆಯುಂ ಮಂದರಕ್ಷ್ಮಾ|
ಧರದೊಳ್ ಕೆಯ್ಗೂಡಿ ಬಂದಬ್ಧಿಗಳೆ ಗಜಘಟಾರೂಪದಿಂ ತಾಂಗೆಯುಂ ಮ॥
ತ್ಕರಿ ತಾಂಗಲ್ ತಾಂಗಿ ಸೋಲ್ಗುಂ ಪೆಜಪೆಜವು ಘಟಾಬಂಧಮೇಂ ಭಂಡ
ಮೆಂಬೊಂ |
ದು ರಣೋತ್ಸಾಹಂ ಮನಕ್ಕುಬ್ಬರಿಸಿರೆ ಸಮರಾಟೋಪಮಂ ತಾಳ್ದಿ ನಿಂದಂ||
(ಇದು ಗರ್ವಂ)

೧೪-ವ|| ಮನಶ್ಶರೀರಖೇದಂ ಶ್ರಮಂ-

ಸೂತ್ರಂ ೧೨೩.

ಕಂ|| ಸುರತಾದಿವ್ಯಾಪಾರಂ |
ಪೊರೆದ ವಿಭಾವಂ ವಿಕೂಣಿತಾಸ್ಯಂ ಮೆಯ್ಯಂ ||
ಕರದಿಂಪೊತ್ತುವುದುಂ ಮೇಣ್ |
ದೊರೆಕೊಳ್ಗುಂ ತಚ್ಛ್ರಮಕ್ಕೆ ನೆಗಳ್ದನುಭಾವಂ ||

ಲಕ್ಷ್ಯಂ.

ಚಂ|| ತಳಿದ ರತಶ್ರಮಂಗಳೆಯಲಿಂಗದಿದೋರ್ಗಲಮರ್ಚಿ ನಿಂದು ತ |
ಣ್ಗೆಳಗೆಲದೊಳ್ ಮಡಲ್ತ ತಳಿರುಯ್ಯಲನೊಯ್ಯನೆ ಬಂದು ಪತ್ತಿ ಕೋ ||
ಮಳತನುವಿತ್ತು ನುಣ್ಗೊಡೆಗಳಂ ಬಗೆಯೊಳ್ ಪೋಸವೇಟದಟ್ಟಿಯಂ |
ಬಳಯಿಸುತೆನ್ನ ಕೆಯ್ಯೊಳಿರದೊತ್ತಿಸಿಕೊಂಬಳನೆಂದು ಕಾಣ್ಬೆನೋ || ೨೦೭||

ವ|| ಮತ್ತಂ.

ಮಃಸ್ರ॥ ಪೊಡವುರ್ತುತ್ತುಂಗಸ್ತನಂ ಕೊಂಕಟಿದು ನಿಮಿರ್ದ ನೀಳಾಳಕಂ ಜೋಲ್ವ ಬಂಬ ।
ಲ್ಮುಡಿ ಸೊಪ್ಪಾಗಿರ್ದ ಬಿಂಬಾಧರಮಣಿ ನಸುಗಂದಿರ್ದ ಕರ್ಣೋತ್ಪಳಂ ಕೆಂ॥
ಪಡರ್ದಾಲೋಲೇಕ್ಷಣಂ ಕಂಪಿಸುವ ತನು ರತಶ್ರಾಂತಿಯಿಂದಂ ಬೆಡಂಗಂ ।
ಕುಡೆ ನೆಮ್ಮಿರ್ದೋಪನಂ ಮೆಯ್ವಮರನೆಲರೊಳೊಲ್ದಾರಿ ಸುತ್ತಿರ್ದಳೊ ವರ್ಳ್॥ ೨೦೮॥

(ಇದು ಶ್ರಮಂ)

೧೫-ವ॥ ಆನಂದಸಮ್ಮೋಹ (ಯೋಗಂ) ಮದಂ.

ಸೂತ್ರಂ ೧೨೪.

ಕಂ॥ ಮದಿರೋಪಯೋಗದಿಂ ಪೆಂ ।
ಪೊದವಿದ ಪಲವಂದಮದೆ ವಿಭಾವಂ ಮದಕು॥
ಣ್ಮಿದ ನಗೆ ಪಾಡು ತೊದಳ್ನುಡಿ ।
ಪದುಳಿಸಿ ನಡೆಯದುದು ಮೊದಲವನುಭಾವಂಗಳ್॥

ವ॥ ಮತ್ತಮಲ್ಲಿ ಸ್ವಾಪಕಿಂಚಿದಾಕುಲಬಾಷ್ಪರೋಮೋದ್ಗಮಾದಿಯುತ್ತಮರ್ಗ ಕ್ಕಂ, ಹಾಸ್ಯಗೀತಸ್ರಸ್ತಾಕುಲಭುಜಕ್ಷೇಪಕುಟಿಲಗತಿಬಂಧಾದಿ ಮಧ್ಯಮರ್ಗ ಕ್ಕಂ, ಅಸ್ಮರಣಘೂರ್ಣನಸ್ಖಲದ್ಗತಿರುದಿತಛರ್ದಿತಹೀನಸ್ವರಾದಿ ಯಧಮರ್ಗ ನುಭಾವಂ, ಉತ್ತಮನ ಮದಂ ಮಧ್ಯಮಂಗಕ್ಕುಂ. ಮಧ್ಯಮನ ಮದಮ ಧಮಂಗಕ್ಕುಂ, ಅಧಮನಮದಂ ತನ್ನಲ್ಲಿಯೇ.

ಲಕ್ಷ್ಯಂ.

ಮ॥ ಮದದಿಂದುಣ್ಮಿದ ಪಾಟಳಚ್ಛವಿಯ ವಕ್ತ್ರಂ ಘೂರ್ಣಿತಾಕ್ಷಿದ್ವಯಂ ।
ಪದೆಪಂ ಬೀಱಿ ಲತಾಂಗಿ ತನ್ನೊಳೆ ತೊದಳ್ಮಾತಾಡುತುಂ ಪಾಡುತೊಂ॥
ದಿದ ತನ್ನೊಂದೆ ನೆೞಲ್ಗೆ ಬೆರ್ಚಿ ತೊಲಗುತ್ತುಂ ಮುಗ್ಗುತುಂ ಬಯ್ಯುನೂಂ ।
ಕದಿರೆಂದಿಂಗದಿರ್ಗಂಡು ನಕ್ಕು ನಲಿದಳ್ ಕಾದಂಬರೀಗೋಷ್ಠಿಯೊಳ್॥ ೨೦೯॥

ವ॥ ಮತ್ತಂ.

ಕಂ|| ಮದಿರಾಪಾನ ವಿಕಾರದೊ |
ಳೊದವಿರೆ ಮುಗೆಳ್ದೇಕ್ಕೆ ಕಣ್ಗೆ ಬರೆ ಗಾಡಿ ಕದ ||
ಕ್ಕದಿಸೆ ಮೊಲೆ ನಡುಗೆ ನಡು ಮಿಳಿ।
ರ್ದದಿರೆ ಕುರುಳ್ ಸುತ್ತಿ ಜತಿಗೆ ಮೆಟ್ಟಿದಳೊರ್ವಳ್ || ೨೧೦||

(ಇವು ಮದಂ)

೧೬-ವ|| ಅರ್ಥಾಪ್ರತಿಪತ್ತಿಯೇ ಜಾಡ್ಯಂ.

ಸೂತ್ರಂ ೧೨೫.

ಕಂ|| ರೋಗಾದಿಹಿತಾಹಿತಸಂ |
ಯೋಗಂ ಪ್ರೇಕ್ಷಾದಿ ಜಡತೆಗೆ ವಿಭಾವಂ ಚೆ ||
ಲ್ವಾಗೆವೆಯಿಕ್ಕದೆ ನೋಡುವು |
ದೇಗಂ ನುಡಿಯಿಲ್ಲದಿರ್ಪುದಿಂತನುಭಾವಂ ||

ಲಕ್ಷ್ಯಂ.

ಚಂ|| ಇನಿಯನ ಪೞಿಕ್ಕಿಪಾರ್ದಬಳೆ ಬೆರ್ಚದೆ ಮೆಲ್ಲುಲಿಯೂಲಿಸಾಲಿಸಾ |
ತನುಮನಲಂಪಿನಿಂದೆಳಸಿ ನೋಡುವಳಿಚ್ಛೆಗೆ ಮೆಯ್ಯನೀವುದಂ ||
ದೆನೆಯೆನೆ ಕೇಳ್ದು ಕೇಳ್ದವನನೀಕ್ಷಿಸುತುಂ ಮಱೆದೆಲ್ಲಮಂ ಬೞಿ |
ಕ್ಕನಿಮಿಷದೃಷ್ಟಿವೆತ್ತಿರದೀತೆಱದೋದಿಪವೀಕುಮಾರಿಯುಂ || ೨೧೧||

(ಇದು ಜಡತೆ)

೧೭-ವ|| ಬಲಾಪಚಯಮುಂ ಗ್ಲಾನಿ.

ಸೂತ್ರಂ. ೧೨೬.

ಉ|| ಗ್ಲಾನಿಗುದಧ್ವಲಂಘನಮನಃಪರಿತಾಪಜರೋಪವಾಸಮು |
ತ್ಪ್ಲಾವವಿಸಿದ್ರರೋಗಸುರತಂ ಕ್ಷುಧೆ ಪೆತ್ತ ತಪಂ ತೃಷಾದಿ ಮಾ ||
ತ್ರೇನೊ ವಿಭಾವಮುಂಗಶಿಥಿಲಂ ಕುಱಿಕಣ್ ನಡುಕಂ ಕಪೋಲವಾ |
ಗ್ದೀನಗತಿಸ್ವಭಾವಮನುಭಾವಮಿವಲ್ತೆ ವಿವರ್ಣಕಾದಿಗಳ್ ||

ವ|| ಅಲ್ಲಿ ತಪದಿನಾದ ಬಲಾಪಚಯಕ್ಕೆ.

ಲಕ್ಷ್ಯಂ.

ಮ|ಸ್ರ|| ಬರಿಯೊಳ್ ಪತ್ತಿರ್ದ ಕಂಕಾಳಿಕೆ ಪೆಡತಲೆಯೊಳ್ ಪೊಕ್ಕ ಕಣ್ ತೋರ್ಪ ಕೆಯ್ಯಾ |
ಲ್ಸಿರೆ ಪಾ ತಾಳಕ್ಕೆ ಪೋತಂದೊಣವಸಿರುಡುಗಿದೆರ್ೂಂದುದಂ ಪೊಣ್ಮಬಾಯ್ ಬೆ |
ಕ್ಕರಿಪೋಗಿದೆರ್ೂಂದುಬಾನಂಗುಳಿ ಗಿಡಿಗಿಡಿಜ-ತ್ರಂಬೋಲಾಗಿರ್ದ ಮೆಯ್ ನ |
ಲ್ಸಿರಿ ಚಿದ್ರೂಪಕ್ಕೆ ಪಕ್ಕಾಗಿರೆ ಚಾಗೆಗುಡಲ್ ಬಂದನೊರ್ವಂ ಮುನೀಂದ್ರಂ||
(ಇದು ಗ್ಲಾನಿ)

೧೮-ವ|| ನಿದ್ರಾಗಾಢಾವಸ್ಥೆಯೆ **ಸುಪ್ತಿ**.

**ಸೂತ್ರಂ. ೧೨೭.**

ಕಂ|| ಮಿಗೆ ತೀವ್ರದ ನಿದ್ರೆಯ ಸು |
ಪ್ತಿಗೆ ನೆಗಟ್ಟಿ ವಿಭಾವಮಕ್ಕುಮುಖಿಳಸ್ವಪ್ನಂ ||
ನೆಗಟ್ಟಿಂಗವಿಕಾರಂ ಕ |
ಯ್ಮಗೆ ಕನವರಿಸುವುದು ಮೊದಲಿವನುಭಾವಂಗಳ್ ||

ಲಕ್ಷ್ಯಂ.

ಚಂ|| ಸುದತಿ ರತಾಂತಸೌಖ್ಯಮನಧೀಶನ ದೇಹದೊಳೊಂದಿ ಪೋಗಲೀ |
ಯದೆ ಪಿಡಿದಂದದಿಂ ತೊಡೆಯು ತೋಳ ತೊಡರ್ಪುಗಳೊಪ್ಪೆ ನಾಡೆಯುಂ |
ಪದೆದಮರ್ದಪ್ಪಿದಂತರ ಮದೊಪ್ಪಿರೆ ಬಂದು ಸುಷುಪ್ತಿ ಚಿತ್ತಮಂ |
ಪುದಿಯೆ ಮಹೀಶನಿರ್ದನಿನಿಸಂ ನಿಜಯೋಗದೆ ಯೋಗಿಯಿರ್ಪವೋಲ್||೨೧೩||

ವ|| ಮತ್ತಂ.

ಚಂ|| ಇನಿಯನಗಲ್ದು ಬೇರ್ನಲೆಗೆ ಪೋದೊಡೆ ಪಂಬಲನಾಂತು ಚಿತ್ತದೊಳ್ |
ಕನಕಲತಾಂಗಿ ತನ್ನ ಶಯನಸ್ಥಲದೊಳ್ ಮುಸುಕಿಟ್ಟು ನಲ್ಲನಂ ||
ಕನಸಿನೊಳಪ್ಪಿಕೊಂಡಧರಸೇವನೆಗೊಪ್ಪಿಸಿ ಮುಂದುಗಾಣದಿಾ |
ಮನೆಯೊಳಗಿರ್ಪನೆಂದು ಸೊಡರ್ವತ್ತಿಸಿ ನೋಡದಳೊಂದುಜಾವಮಂ||೨೧೪||
(ಇವು ಸುಪ್ತಿ)

೧೯-ವ|| ಮನಸ್ಸಂಮಿಾಳನಂ ನಿದ್ರೆ.

ಸೂತ್ರಂ ೧೨೮.

ಕಂ|| ಕ್ಲಮಚಿಂತಾಲಸ್ಯಮದ |
ಶ್ರಮಸ್ವಭಾವಾದಿ ನಿದ್ರೆಗೆ ವಿಭಾವಂ ಜ್ಯಂ ||
ಭಮತಿಜಡಶ್ವಾಸಂ ದೃ |
ಜ್ನಿಮೀಳನಂ ತೂಂಕಡಿಕೆ ಯಿವನುಭಾವಂಗಳ್ ||

ಲಕ್ಷ್ಯಂ.

ಚಂ|| ಬಳೆದನುರಾಗದೆನ್ನ ಮನಮೆತ್ತೆಳೆದತ್ತಿರದಿತ್ತು ಪುಷ್ಪಕೋ |
ಮಳತನುವುಂ ಪೊದಳ್ದು ಮನಮುಂ ಸುರತಾಬ್ಧಿಯನೀಸಿ ಪತ್ತೆಸಾ ||
ರ್ದೆಳಸಿರದೊಯ್ಯನೊಯ್ಯನರೆಮುಚ್ಚುವ ದೃಷ್ಟಿವಿಜೃಂಭವೊಪ್ಪೆ ಕ |
ಣ್ಗೊಳಿಸಿರೆ ತೋಳ ತಪ್ಪಿದೊಳೆ ತಳ್ತೊರಗಿರ್ದಳನೆಂದು ಕಾಣ್ಬೆನೋ|| ೨೧೫||
(ಇದು ನಿದ್ರೆ)

೨೦-ವ|| ಸಂತೋಷಮೇ ಧೃತಿ.

ಸೂತ್ರಂ ೧೨೯.

ಕಂ|| ನುತಬೋಧೆ ಬಹುಶ್ರುತವಾ |
ಸುತಪಸ್ಸೇವಾಪ್ತಭಕ್ತಿಲಾಭಾದಿಗಳುಂ ||
ಧೃತಿಗೆ ವಿಭಾವಂ ಸುಖವೊದ |
ವೆ ತಳೆವುದಱಿವೋದನೆನೆಯದಿರವನುಭಾವಂ ||

ಲಕ್ಷ್ಯಂ.

ಮ|ಸ್ರ|| ಸಿರಿವೆಣ್ಣಂ ದೂವೆದೊಱೆಂಗೆಣೆಯೆನೆ ಬಗೆದಂ ಮತ್ತಮೀವಿಶ್ವವಿಶ್ವಂ |
ಭರೆಯಂ ಮೃತ್ಪಿಂಡಮಾತ್ರಾಂತರಮೆನೆ ಬಗೆದಂ ಜೈನದೀಕ್ಷಾವ್ಯಪೇಕ್ಷಾ ||
ತುರನಾತ್ಮೀಯಾಂಗಮಂ ಕಲ್ಮರನೆನೆ ಬಗೆದಂ ಲಬ್ಧಲಬ್ಧಿಪ್ರವೇಶಂ |
ಧರಣೀಶಂ ವರ್ಜಿತಾಶಂ ಪರಮಸುಖವಶಂ ಕಾವ್ಯಕರ್ಣಾವತಂಸಂ|| ೨೧೬||

ವ|| ಮತ್ತಂ.

ಕಂ|| ತಡೆಯದೆ ನಿನಗಪ್ಪುದನೀ |
ಗಡೆ ಬಗೆ ಮೆಳ್ಪಡದಿರೆಂಬುದನಿಮಿತ್ತಂ ತಾಂ ||
ನುಡಿದಿರ್ ಮೂದಲಿಸಿದಿರಿಂ |
ತಡೆವೆನೆ ಕಟ್ಟಿದುದೆ ಸುರಗಿ ಮೆಟ್ಟಿದುದೆ ಕಳಂ || ೨೧೭||

ವ|| ಮತ್ತಂ.

ಮ|| ಪಱಿದಾತ್ಮಪ್ರಿಯದಾರದಾರಕಸುಹೃತ್ಸಂಬಂಧಬಂಧಂಗಳಂ |
ಮುಱಿದುರ್ವೀವಲಯಾಧಿರಾಜಸುಖಸೇವಾರಂಭಣಸ್ತಂಭಮಂ ||
ಮೆಱೆದುದ್ಭೂತವಿರಕ್ತವೃತ್ತಿಮದಲೀಲಾವೇಗಸಂಯೋಗಮಂ |
ಪೊಱಮಟ್ಟತ್ತು ತಪೋವನಕ್ಕೆ ತದಿಳಾಪಾಲೋದ್ಧುರಂ ಸಿಂಧುರಂ ||೨೧೮||
(ಇದು ಧೃತಿ)

೨೧-ವ|| ಈವಸ್ತುವೀತೆಱನೆಂದು ವಿಚಾರಿಪುದು ವಿತರ್ಕಂ.

ಸೂತ್ರಂ ೧೩೦.

ಕಂ|| ಸಂದೇಹವಿಮರ್ಶಜ್ಞಾ |
ನಂ ದಲ್ ಮುಖ್ಯಂ ವಿತರ್ಕಕಾದ ವಿಭಾವಂ ||
ಸಂದ ಶಿರಃಕಂಪಂ ತಱಿ |
ಸಂದುಱಿ ಕುಡುವುರ್ಜವಿವನುಭಾವಂಗಳ್ ||

ವ|| ಮತ್ತಂ ಕಾರ್ಯಸಾಧನಸಮೂಹಮುಂ ಮರಳಿಮರಳಿ ಗ್ರಹಿಸುವುದುಂ ಬಿಡುವುದುಂ ಅನುಭಾವಂ.

ಲಕ್ಷ್ಯಂ.

ಮ|| ಘನುವುಂ ಕರ್ವಿನ ಬಿಲ್ ಗಡಂ ಗೊಲೆಯುಮುಂ ನೀರೇಜಸೂತ್ರಂ ಗಡಂ |
ನನೆಗಳ್ ಬಾಣಚಯಂ ಗಡಂತತನು ತಾಂ ಮತ್ತಂ ಮನಂಗೊಂಡು ಕಾ ||
ಯ್ದನುವಿಂದಾರ್ದಿಸುತಿರ್ಪನುರ್ಚಿದೆಡೆಯೊಳ್ ಪುಣ್ಣೆತ್ತರಿಂ ತೀವಿತಿ |
ಲ್ಲೆನಸುಂ ಮನ್ಮಥಶಸ್ತ್ರವಿದ್ಯೆಯಿದು ದಲ್ ಬೇಱೊಂದು ಶಿಕ್ಷಾಕ್ರಮಂ ||

ವ|| ಮತ್ತಂ.

ಮ||ಸ್ರ|| ಅವತಂಸಂ ಮೋಕ್ಷಲಕ್ಷ್ಮೀಯುವತಿಯನೊಲಿಸಲ್ ಸಾಲ್ವುದೇ ದಿವ್ಯಭಾಷಾ।
ರ್ಣವಗಭೀರ್ವಾಸದೊಳ್ ಪುಟ್ಟಿದುವೆ ಭವವಿಷಾವೇಶವಿಧ್ವಂಸನಂಗೆ ||
ಯ್ದು ವಿಮೋಹಧ್ವಾಂತಮಂ ತೂಳ್ದಿದುವೆ ಬಗೆವೊಡೇಂ ಬಾಲ್ತೆ ಪಾಷಾ
ಣರೂಪಂ |
ನವರತ್ನಂ ಮನ್ಮನೋಮುದ್ರಿಕೆಯೊಳವಿಚಲಂ ನಿಲ್ಕೆ ರತ್ನತ್ರಯಂಗಳ್ ||

ವ|| ಅಂತುಮಲ್ಲದೆಯುಂ.

ಉ|| ಭೋಗಿಪೆನೆನ್ನ ಜವ್ವನಮನೀಧನಮಂ ತವೆ ನನ್ನಿಯಿಂ ಕುಚಾ।
ಭೋಗಭರಾನತಾಂಗಿಯರೊಳನ್ನೆಗಮುತ್ತಮನಂ ತಗುಳ್ವೆನೆಂ ||
ದಾಗಿಯುಮೆಂತು ಸಿನ್ನ ಮೊಲಗಟ್ಟಲೆಗಾಂ ಬೆಱಗಾದೆನೆಂದು ಪೇ।
ೞೇಗಳೊ ಬೈಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ||೨೨೧
(ಇವು ವಿತರ್ಕಂ)

೨೨-ವ|| ಚಿತ್ತವಿಪ್ಲವಮೆ ಉನ್ಮಾದಂ.

ಸೂತ್ರಂ ೧೩೧.

ಕಂ|| ಧನರಮಣವಿಯೋಗಗ್ರಹ।
ಘನರುತಿ ಮುಖ್ಯಂ ವಿಭಾವಮುನ್ಮಾದಕ್ಕಿ ||
ನ್ನನಿಮಿತ್ತಸ್ಮಿತರುದಿತಾ।
ತ್ತನೃತ್ಯಗೀತೋತ್ಕಟಾದಿ ನೆಗೞ್ದನುಭಾವಂ ||

ವ|| ಮತ್ತಂ ಬೀೞ್ವುದೇೞ್ವುದು ಕುಳ್ಳಿರ್ಪುದು ಬಾಯ್ಗೆ ಬಂದುದನೆಂಬುದು ಪಾಯ್ವುದು ಘೀಯೆಂಬುದು ಬೂದಿಯಿಂದೊಕ್ಕಮಾಲೆಯಿಂ ಬೀದಿಗಪ್ಪಡದಿಂ ಘಟಕಂಠದಿಂ ಸಿಂಗರಿಸಿಕೊಂಬುದುಮಕ್ಕುಂ. ಈ ಪೇೞ್ದನುಭಾವ ವಿಭಾವಂಗಳೊಂದೆರಡೊಡಂಬಡುವಂತೆ ವರ್ಣಿಪುದಲ್ಲ[ದೆಲ್ಲ ಮಿ]ರವೇೞ್ಕು ಮೆಂಬುದಿಲ್ಲಂ.

ಲಕ್ಷ್ಯಂ.

ಮ॥ ಕಳಹಂಸಾಲಸಯಾನೆಯುಂ ಮೃಗಮದಾಮೋದಾಸ್ಯನಿಶ್ವಾಸೆಯುಂ ।
ತಳಿರೇ ತಾವರೆಯೇ ಮದಾಳಿಕುಳಮೇ ಕರ್ನೆಯ್ದಿಲೇ ಮತ್ತಕೋ ॥
ಕಿಳಮೇ ಕಂಡಿರೆ ಪಲ್ಲವಾಧರೆಯುನಂಭೋಜಾಸ್ಯೆಯುಂ ಭೃಂಗಕುಂ ।
ತಳೆಯುಂ ಕೈರವನೇತ್ರೆಯುಂ ಪಿಕರವಪ್ರಖ್ಯಾತೆಯುಂ ಸೀತೆಯುಂ ॥ ೨೨೨॥

(ಇದುನ್ಮಾದಂ)

೨೩-ವ॥ ವಿನಿದ್ರೆಯೇ ಬೋಧೆ.

ಸೂತ್ರಂ ೧೩೨.

ಕಂ॥ ಕನಸು ಕನವರಿಕೆ ಪಸಿವುರೆ ।
ದನಿಸೋಂಕುಗಳಾದಿ ಬೋಧೆಗೆ ವಿಭಾವಂ ದಲ್ ॥
ತನುಕಂಠವಲನದೃಙ್ಮ ।
ರ್ದನಜೃಂಭಣಮುಕ್ತಶಯನವಿಂತನುಭಾವಂ ॥

ಲಕ್ಷ್ಯಂ.

ಮ।ಸ್ರ॥ ತೆರೆವೊಯ್ಲಿಂದಾದ ತುಂತುರ್ವನಿ ನಿಜತನುವಂ ತೀವೆ ನಿದ್ರಾಂಗನಾನಿ ।
ರ್ಭರಸಂಭೋಗಾಂತ್ಯದೊಳ್ ಪೊಣ್ಮಿದ ಬೆಮರ್ವನಿಯುಂ ಪೋಲೆ ವಾರಾಶಿ ಧೀರ॥
ಸ್ವರಮಂ ತಳ್ವೊವ್ಯಜೇಂದ್ರಾದ್ಯಮರಜಯಜಯಧ್ವಾನದಿಂಬಾಗಳೆಚ್ಚಾ।
ದರದಿಂ ಕಣ್ಬಿರ್ದನಾಲೋಕನಕೃತವಿಬುಧಾನಂದಕಂದಂ ಮುಕುಂದಂ ॥

ವ॥ ಮತ್ತಂ.

ಕಂ॥ ಗೃಹದೀರ್ಘಿಕೆಯಿಂದೆಳ್ಚ ।
ತ್ತರ್ಪ ಹಂಸರುತಿಮಧುರಮಧುಕರೀಝಂಕಾರಂ ॥
ಬಹುವಿಧಗೀತರಸಾಮೃತ ॥
ಲಹರಿಗಳಿತ್ತುವು ಸುಖಪ್ರಬೋಧಮನಾಗಳ್ ॥ ೨೨೪॥

(ಇದು ಬೋಧೆ)

೨೪-ವ॥ ಮನಸ್ತಾಪಮೇ ಅಮರ್ಷಂ.

**ಸೂತ್ರಂ ೧೩೩.**

ಕಂ|| ವಿರಹಾಭಿಲಾಷೆ ದೋಷಾ |
ತಿರೇಕಮುಖ್ಯಂ ವಿಭಾವಮಾಮಯಕಕ್ಕುಂ ||
ಉರಿವ ತನು ವದನಶೋಷಣ |
ಶರೀರವಿಕ್ಷೇಪಕಾದಿ ನೆಗಳ್ದನುಭಾವಂ ||

**ಲಕ್ಷ್ಯಂ**

ಚಂ|| ಅಳುರ್ದಲರಂಬುಗಿಚ್ಚು ನಿಜಕೋಮಳದೇಹಮನೆಯ್ದೆ ಪರ್ವೆ ತ |
ಣ್ಣೊಳಗದ ಮೃಣಾಳಮಂ ತೆಗೆದು ಬೆಂಗದಿರ್ಗಿತ್ತವೊಲಾಗೆ ನೊಂದು ಬೆಂ ||
ದಳದಳಿಪಾಲಿನೀರ್ ಕರ್ಪುಡಿಯೆ ಚಂದನದಣ್ಕೆಯೆ ಬೆಂಕೆಯಾಗೆ ತಾಂ |
ತಳಿರಲರ್ವಾಸಿನೊಳ್ ಪೊರಳುತಿರ್ದಳದೊರ್ವನ ಬೇಟದೇಟಿಗ್ಗಿಯಿಂ||೨೨೫||
(ಇದಾಮಯಂ)

೨೨೫-ವ|| ಚಿತ್ತಚಮತ್ಕಾರಮೆ **ಭಯಂ**, ಅದು ತ್ರಾಸಭೇದಂ.

**ಸೂತ್ರಂ ೧೩೪.**

ಕಂ|| ವ್ಯಾಳಮೃಗರಾಕ್ಷಸಾಶನಿ |
ಶೈಳಾವನಿಕಂಪಮಾದಿಯೆ ಭಯಕ್ಕೆ ವಿಭಾ ||
ವಾ ಳಿ[ಯೆ ಪುಳಕೋತ್ಕಂಪ]ವಿ |
ಶಾಳಸ್ತಂಭಪ್ರಮೂರ್ಛೆಯಿಂತನುಭಾವಂ ||

**ಲಕ್ಷ್ಯಂ.**

ಮ|| ಕಿಡಿಯಂ ಕಣ್ ಸಲೆ ಸೂಸೆ ದಾಡೆ ಕುಡುಮಿಂಚಂ ಬೀಱೆ ಘೀರಸ್ವರಂ |
ಸಿಡಿಲಂ ಮೇಳಿಸೆ ಬಂದು ಸಿಂಗಮಿಭಕುಂಭಂಬೊಯ್ವುದಂ ಕಾಣುತುಂ ||
ನಡುಕಂ ಕೆಯ್ಮಿಗೆ ಬೀಯದಂ ಭರದೆ ನೋಡುತ್ತೊಂದು ಪಾಟಿಬ್ಬಾವಿಯೊಳ್ |
ಕೆಡೆದಾಗಳ್ ಮರವಟ್ಟು ಮೂರ್ಛೆವಡೆದಿರ್ದಂ ಭೀತಿಯೇಗೆಯ್ಯದೋ||೨೨೬||
(ಇದು ಭಯಂ)

೨೨೬-ವ|| ಮನಃಪೀಡೆಯೇ **ವಿಷಾದಂ**.

ಸೂತ್ರಂ ೧೩೫.

ಕಂ|| ತನ್ನಿಸೆವ ಕಾರ್ಯಭಂಗಂ ।
ತನ್ನಾಶಂ ತಾಂ ವಿಷಾದಕೆ ವಿಭಾವಂ ಸಂ ||
ಪನ್ನಸಹಾಯಾನ್ವೇಷಣ ।
ವಿನ್ನೊಪ್ಪುವುಪಾಯಚಿಂತೆ ಯಿಂತನುಭಾವಂ ||

ವ|| ಮತ್ತಂ ವಿಘೂರ್ಣನಸಂಭ್ರಮಾದಿಯುಮಕ್ಕುಂ. ಉತ್ತಮಮಧ್ಯಮರ್ಗಿದಂ ಪೇಳ್ವುದು, ಮುಖಜಿಹ್ವಾಶೋಷಣಾಶ್ರುವಿಕೃತಸ್ವನ ನಿದ್ರಾನಾಶಶ್ವಸಿತ ಧ್ಯಾನಾದ್ಯನುಭಾವದಿಂಪಮಥಮರ್ಗ ವರ್ಣಿಪುದು.

ಲಕ್ಷ್ಯಂ.

ಉ|| ಇಂಬಱಿದೆನ್ನನೊಯ್ದು ನೆರಪಲ್ ಸಖಿಯಿಲ್ಲಭಿಮಾನಮೆಂಬ ರೋ ।
ಗಂ ಬಲವಂತಮಾದಪುದು ನಲ್ಲನೆ ಕಟ್ಟಭಿಮಾನಿ ನಾಣ ಕಾ ||
ಪುಂ ಬಿಡದೀಗಳೀಗಳಿನ ಜವ್ವನಮುಂ ಬಱಿಕಿಲ್ಲ ಕಾಲನಂ ।
ನಂಬಲೆ ಬಾರದೆಂದಬಲೆ ಚಿಂತಿಸಿ ದೂಱಿಸಿ ತಾಂ ಪಲುಂಬಿದಳ್ || ೨೨೭||
(ಇದು ವಿಷಾದಂ)

೨೭-ವ|| ಕಾಲಾಕ್ಷಮತ್ವಮೆ ಔತ್ಸುಕ್ಯಂ.

ಸೂತ್ರಂ ೧೩೬.

ಕಂ|| ಕನದಿಷ್ಟಸ್ಮರಣವಿಲೋ ।
ಕನಾದಿಯೆ ವಿಭಾವಮುತ್ಸುಕಕೆ ರಣರಣಕಂ ||
ಜನಿತಶ್ವಸಿತೋಚ್ಛ್ವಸಿತಂ ।
ಮನದ ಬಯಲ್ದೆಸೆಯ ನೋಟಮಿಂತನುಭಾವಂ ||

ಲಕ್ಷ್ಯಂ.

ಚಂ|| ಇವಳವಲೋಕನಾಕುಳಿತೆ ಮೆಯ್ಯೆಱಿಯಳ್ ಪರಿವಾಗಳಿಂತೆ ಬ ।
ಳ್ಕುವ ನಡು ಮಧ್ಯರಕ್ಕುಡಿಗುಮೆಂದು ಘನಸ್ತನಯುಗ್ಮಮಂಜಿದಂ ||
ತೆವೊಲೆನಸುಂ ಕದಕ್ಕದಿಸೆ ಸೋರ್ಮುಡಿಯುಂ ಭರಭೀತಿಯಿಂದೆ ಸೂ ।
ಸುವ ತೆಱದಿಂದೆ ಮಾಲೆಯನುಗುಳ್ತರೆ ಬಂದಳದೊಂದುಲೀಲೆಯಿಂ ||೨೨೮||

ವ|| ಮತ್ತಂ.

ಉ|| ನೋಡುವಲಂಪಿನಿಂ ನೆಱೆಯೆ ಕಯ್ಗೆಯಲುಂ ಮಱೆದೊಂದೆ ಕಣ್ಣ ನು |
ಣ್ಗಾಡಿಗೆಯೊಂದೆ ಕರ್ಣದ ಕನನ್ಮಣಿಕುಂಡಲವೊಂದೆ ಕೆಯ್ಯ ಪೊಂ ||
ಜೂಡಗವೊಂದೆ ಕಾಲ ಮಿಸುಪಂದುಗೆಯೊಪ್ಪಿರೆ ಬಂದೊಡಂದು ಱೋ |
ಡಾಡಿದುದರ್ಧನಾರಿಯಿವಳೆಂದು ಸಖೀಜನಮೆಯ್ದೆ ನಾರಿಯಂ || ೨೨೯||

(ಇದು ಔತ್ಸುಕ್ಯಂ)

೨೮-ವ|| ಪ್ರತಿಚಿಕೀರ್ಷೆಯೇ ಅಮರ್ಷಂ.

ಸೂತ್ರಂ ೧೩೭.

ಕಂ|| ಕುಲವಿದ್ಯೈಶ್ವರ್ಯಾದಿಯಿ |
ನೊಲಿದಾಕ್ಷೇಪಾದಿಯಾಯಮರ್ಷವಿಭಾವಂ ||
ವಿಲಸದುಪಾಯಾನ್ವೇಷಣ |
ವೊಲೆವ ಶಿರಂ ಧ್ಯಾನಗರ್ವಮಿಂತನುಭಾವಂ ||

ಲಕ್ಷ್ಯಂ.

ಮ|ಸ್ರ|| ಉಱದೆನ್ನಂ ಮಾಯೆಯಿಂ ಬಂಚಿಸಿ ಮಹಿಜೆಯನೆಂತೊಯ್ದನೊಯ್ದಂ ದದಿಂ ಪೊ |
ಚ್ಚಱದಿನ್ನುಂ ತೋರ್ಕೆ ಸಂಗ್ರಾಮದೊಳೆಡೆಗಡಿದಾ ತೋಳ್ಗಳಿರ್ಪತ್ತುಮಂ ಕಣ್ ||
ಪೊಱಪಾಯ್ತರ್ಪನ್ನೆಗಂ ಪಂದಲೆಗಳನೆರ್ದೆಯಂ ಮೆಟ್ಟಿ ಜೀರೇಱಿಸಿನಂ ಬೇ |
ರ್ಪಱವನ್ನಂ ಕಿಱ್ತುಕಿಱ್ತಪ್ಪಳಿಸಿ ನೆಲದೊಳೋರೊರ್ಮೆ ಮಾಱದ್ದಿ ತೋರ್ಪೆಂ || ೨೩೦ ||

ವ|| ಮತ್ತಂ.

ಕಂ|| ಏನೇನೊ ಮದನುಜರುಮೆನ |
ಗಾನತರಣಮಾಗದಿರ್ದರುನ್ಮದಮುವರ್ಗಂ ||
ತೇನೇತಱೊಳಾಯ್ತದನಿನಿ |
ಸಾನುಂ ಬೇಗದೊಳೆ ಕಳೆದು ತೋಱೆನೆ ರಣದೊಳ್ || ೨೩೧||

(ಇವಾಮರ್ಷಂ)

೨೯-ವ|| ಧ್ಯಾನಮೆ ಚಿಂತೆ.

ವಿಚಾರಂ|| ಇದು ಸ್ಮೃತಿಯಿಂ ವ್ಯತಿರಿಕ್ತಂ. ಅನುಭೂತವಸ್ತುಸ್ಮರಣಮೇ ಸ್ಮೃತಿ ಯದಂ ಬಿಡದೆ ಧ್ಯಾನಿಪುದು ಚಿಂತೆ—ವಿತರ್ಕದಿಂ ಚಿಂತೆ ಬೇಱಿ. ಚಿಂತೆಯಿಂ ಬೞಿಕಾದೊಡವೊರ್ಮೆ ವಿತರ್ಕಮಪ್ಪುದು. ವಿತರ್ಕದಿಂ ಬೞಿಕ್ಕಾದೊಡವೊರ್ಮೆ ಚಿಂತೆಯಪ್ಪುದು.

ಸೂತ್ರಂ ೧೩೮.

ಕಂ|| ದಾರಿದ್ರ್ಯಮಿಷ್ಟವಸ್ತ್ವಪ |
ಹಾರಾದಿ ವಿಭಾವಮಲ್ತೆ ತಾಪಂ ಕಾರ್ಶ್ಯಂ ||
ಭೂರಿಕರಶೋಷಮುಖಶೂ |
ನ್ಯೋರುಮನಃಪ್ರಭೃತಿ ಚಿಂತೆಗಾದನುಭಾವಂ ||

ಲಕ್ಷ್ಯಂ.

ಉ|| ದೂರಿಸಿ ಸುಯ್ದು ಹಸ್ತತಳಮಂ ಕದಪಿಂಗಿರದೊಯ್ದು ಧಾತ್ರನಂ |
ಬೇರದೆ ಬಯ್ದು ಕಣ್ಬನಿಯಿನಂಶುಕಮಂ ನೆರೆ ತೊಯ್ದು ತೊಯ್ದದಂ ||
ಸೈರಿಸಳೆಂದು ಕಾಯ್ದು ನೆಱಿಗೊಂಡಿರ ಪೂಗಣೆಯಯ್ದುವೊರ್ವನಿಂ |
ನ್ನಾರಿದನಿಂಬುಕೆಯ್ದು ಕಡುವನ್ನರೆನುತ್ತೆನಸುಂ ಪಲುಂಬಿದಳ್ || ೨೩೨||

ವ|| ಮತ್ತಂ.

ಚಂ|| ಎರವ ಮರಲ್ವ ಲಲ್ಲಯಿಪ ಕಾಲ್ವಿಡಿಯೆಂಬುದನಿಂಬುಕೆಯ್ವಲಂ |
ಕರಣವಿಳಾಸಮಂ ಮೆಱಿವ ಮೇಳಿಸುವಂದಿನ ರೂಪು ಶಾಸನಂ ||
ಬರೆದುದು ಬರ್ಚಿಸಿತ್ತಮದುರ್ದಲ್ದುದಳುಂಕಿದುದುರ್ಚಿ ನೊಂಕುಬೇ|
ವರಿದುದು ಬೆಚ್ಚುದಚ್ಚುಱಿದುದೆನ್ನೆರ್ದೆಯೊಳ್ ಲಲಿತಾಂಗದೇವನಾ||೨೩೩

(ಇದು ಚಿಂತೆ)

೩೦-ವ|| ಅಕ್ಷಮೆಯೇ ಅಸೂಯೆ.

ಸೂತ್ರಂ ೧೩೯.

ಕಂ|| ಪರಸಕಲೈಶ್ವರ್ಯಸ್ತ್ರೀ |
ತ್ರರವಮಸೂಯೆಗೆ ವಿಭಾವಮನುಭಾವಂ ತ||
ತ್ಪರನಿಂದಾ ಭೃಕುಟಿಮುಖಂ |
ಪಿರಿದೀರ್ಷ್ಯಾಲೋಕನೋಕ್ತಿದೋಷಾದಿ ವಲಂ ||

ಲಕ್ಷ್ಯಂ.

ಚಂ|| ನಡೆದುಡಿಳೇಶನೊಳ್ ತೊಡರ್ದುದನ್ನೆಗಮಾತನ ಗಂಡಗರ್ವದಿಂ |
ನಡೆಗುಮೆ ರಾಮನಂಬು ಪೆಱನಂ ನಡೆ ಕಾಲ್ನಡೆಗೆಟ್ಟು ನಿಲ್ಕುವಿೞ ||
ನುಡಿ ತಡಮಲ್ತು ನಾಳೆಯೆ ರಣಾಂಗಣದೊಳ್ ನಡೆ ನೋಡು ನೀಂ ಮರು|
ಳ್ವಡೆಯೊಡಗೂಡಿ ತಾಂಡವಮನಾಡುವ ರಾವಣನಟ್ಟೆಯಾಟಮಂ || ೨೩೪||

ವ|| ಮತ್ತಂ.

ಚಂ|| ದನುಜರನಾಮುರಾರಿ ಗೆಲೆ ಕಾದುವಕಾಲದೊಳಾನದೇಕೆ ಪು |
ಟ್ಟೆನೊ ಗಡಮಂದು ಪುಟ್ಟಿದೊಡೆ ದೈತ್ಯಕುಲಕ್ಕೆ ಕಳಂಕಮಾಗಲೀ ||
ವೆನೆ ದನುಜಾರಿಯೆಂಬ ಪೆಸರಂ ಸಲಲೀವೆನೆ ಕಾದಿ ಪೋಗಲೀ |
ವೆನೆ ತಲೆದೋಱಲೀವೆನೆ ಮುಕುಂದನನೆಂದುರಿದಂ ಪರಾಂತಕಂ || ೨೩೫||

ವ|| ಮತ್ತಂ.

ಉ|| ಕಾಟ್ಪರಮಾಗೆ ಕಾವ್ಯರಸಮರ್ಥಮುಮಕ್ಕರಮುಂ ಪ್ರತೀತಿಯಂ |
ಮಾಱುಪ್ಪೆನೆಗಂ ಜಲಕ್ಕನಿರೆ ಪೇೞದೆ ಕೆಮ್ಮನೊಱಂಟುವೇಟ್ಟು ಚಿಃ ||
ನೋಟ್ಟದೆ ಮುಯ್ವನಾಕೃತಿಗೆ ಪಂಜಿಕೆವೇಟ್ಪುದದರ್ಕೆ ಟಿಪ್ಪಣಂ |
ಬೇಟ್ಟುದು ಟೀಕೆ ವೇಟ್ಪುದೆನೆ ಪೇೞ್ವವನುಂ ಕವಿಯೆಂಬ ಲೆಕ್ಕಮೇ||೨೩೬ ||
(ಇದು ಅಸೂಯೆ)

೩೧-ವ|| ಆಕಾರಗುಪ್ತಿಯೇ ಅವಹಿತ್ಥಂ.

ಸೂತ್ರಂ ೧೪೦.

ಕಂ|| ಅವಹಿತ್ಥಂ ಭಯರಾಗಾ |
ದಿವಿಭಾವದೆ ಮಱೆಸುವುದೆ ವಲಂ ಮತ್ತಿನ ಮಾ ||
ತು ವಿಳೋಕನವಿಲ್ಲದ ಧೈ |
ರ್ಯವೆ ಯುಱೆಯನುಭಾವವಿಂತದರ್ಕನುಮತದಿಂ ||

ಲಕ್ಷ್ಯಂ,

ಚಂ|| ಮಸೆದಱಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲ |
ಜ್ಜಿಸಿ ತಲೆವಾಗಿ ಕಂಡು ಮಣಿಕುಟ್ಟಿಮದೊಳ್ ನೆಱೆ ನೋಡಿ ಮತ್ತೆ ಮಾ ||
ನಸದೊಳಗಿಟ್ಟೊಡಂ ನವಸುಖಾನುಭವಕ್ಕೆರೆಮುಚ್ಚಿ ಕಣ್ಗಳಂ |
ಪಸರಿಪ ಹೋಮಧೂಮಲತೆಗಂದು ಶಶಿಪ್ರಭೆ ದೂರನೇಱಿಪಳ್ || ೨೩೭||

(ಇದು ಅವಹಿತ್ಥಂ)

೩೨-ವ|| ಚಂಡತ್ವಮೆ ಉಗ್ರಂ.

ಸೂತ್ರಂ ೧೪೧.

ಕಂ|| ಖಲಚಾರ್ಯದ್ರೋಹಾಸ |
ತ್ಪ್ರಲಾಪಮುಖ್ಯಂ ವಿಭಾವಮುಗ್ರಕ್ಕೆ ವಲಂ ||
ಕೊಲೆ ಬಂಧನತಾಡನಮಿವು |
ಸಲೆ ನಿರ್ಭರ್ತ್ಸನಮಿವಾದಿ ತತ್ತ್ವನುಭಾವಂ ||

ಲಕ್ಷ್ಯಂ.

ಮ|ಸ್ರ|| ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡಜೂದಿಂ |
ಗಿದು ಪಾಂಚಾಳೀಪ್ರಪಂಚಕ್ಕಿದು ಕುಹಕಸಭಾಳೋಕನಭ್ರಾಂತಿಗೆಂದೋ||
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲ್ದುರಮುಂ ಕೆನ್ನೆಯಂ ನೆತ್ತಿಯಂ
ಮಾ |
ಣದಿವ್ವೈದುಂ ದುರ್ನಯಕ್ಕೆಯ್ದೆಡೆಯನುರುಗದಾದಂಡದಿಂ ಭೀಮಸೇನಂ ||

ವ|| ಮತ್ತಂ.

ಶಾ|| ಸಂದುಗ್ರಾಹಿತರಕ್ತದಿಂದೆ ಕೆಸರಾಯತ್ತೀಧರಾಚಕ್ರವಿ |
ನ್ನೆಂದಿಂಗಾಱುವುದೊಟ್ಟಿದಟ್ಟೆಗಳ ಪೆರ್ಬೆಟ್ಟಂಗಳಿಂ ಬಟ್ಟೆಯಿ ||
ನ್ನೆಂದಿಂಗಪ್ಪುದೊ ಮಾರಿಗಂ ಪಸಿವದಿನ್ನೆಂದಪ್ಪುದೆಂಬಂದದಿಂ |
ಕೊಂದಂ ಸೇವಣಸೈನ್ಯಮಂ ಸಮರದೊಳ್ ಬಲ್ಲಾಳಭೂಪಾಳಕಂ ||೨೩೮

(ಇದು ಉಗ್ರಂ)

೩೩-ವ|| ಆವೇಶರೂಪಮಪಸ್ಮಾರಂ.

ಸೂತ್ರಂ ೧೪೨.

ಮ|| ಮಸಣಂ ಶೂನ್ಯಗೃಹಂ ವನಂ ನೆಗಳ್ದ ಯಕ್ಷಂ ದೇವನುಂ ಬ್ರಹ್ಮರಾ |
ಕ್ಷಸನಾಧಾತುವಿಷಮ್ಯತಾಶುಚಿತೆಗಳ್ ಭೂತಂ ಪಿಶಾಚಾದಿ ಭಾ ||
ವಿಸೆ ಪೆಂಪಿಂಪೆ ವಿಭಾವಮಕ್ಕುಮನುಭಾವಂ ತಾನಪಸ್ಮಾರಕ |
ಕ್ಕೆಸೆಗುಂ ಬಾಯ್ನೊರೆ ಕಂಪಿತಂ ರುದಿತವೋಟಂ ಸ್ವೇದಮಿಂತಾದುವುಂ ||

ಲಕ್ಷ್ಯಂ.

ಚಂ|| ಎಲೆ ಎಲೆ ಮಂತ್ರವಾದಿಗಳಿರಾ ಪರದೇಸಿಯ ಕಂದ ಸೀತಸೀ |
ಮಲಯಪಥಪ್ರದೇಶದೊಳೆ ಪೆತ್ತ್ಸಿದಂ ತಲೆಗಾವುದೀತನಂ ||
ಒಲೆವುತಮುತ್ತೆ ಬೊಬ್ಬಿಡುತೆ ಬಾಯ್ನೊರೆಸೂಸುತೆ ಬೀೞುತೋಡುತುಂ |
ಪಲವು ವಿಕಾರಮಂ ತಳೆದಳೇವೆನೆನುತ್ತುಱೆ ಬಿಳ್ದಳುರ್ವಿಯೊಳ್ || ೨೪೯||
(ಇದಪಸ್ಮಾರಂ)

ವ್ಯಭಿ (ಸಂ) ಚಾರಿಭಾವಂ ಸಮಾಪ್ತಂ.

---

ವ|| ಇಂ ರಸಾಭಾಸಭಾವಾಭಾಸಂಗಳಂ ಪೇೞ್ವೆಂ.

ಸೂತ್ರಂ ೧೪೩.

ಕಂ|| ನೆಗಳ್ದ ನಿರಿಂದ್ರಿಯದೊಳ್ ತಿ |
ರ್ಯಗಾದಿಯೊಳ್ ಪುದಿದ ವಿವಿಧರಸಭಾವಂಗಳ್ ||
ಬಗೆವೊಡವಾಭಾಸಂಗಳ್ ಪೆಂ |
ಪೊಗೆದ ವಿಭಾವಾನುಭಾವದಾರೋಪಿತದಿಂ ||

ವ|| ಅಲ್ಲಿ ನಿರಿಂದ್ರಿಯಕ್ಕೆ.

ಲಕ್ಷ್ಯಂ.

ಮ|ಸ್ರ|| ಕಳಸಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ ಪುಂಸ್ಕೋಕೀ|
ಕಿಳನಾದಂ ವೇದನಾದಂ ಕುಡಿ ಗುಡಿ ಮಧು ಮಾಹೂರ್ತಿಕಂ ಪೂತವಲ್ಲೀ||
ಕುಳವೆಲ್ಲಂ ನಿಬ್ಬಣಂಬಂದಬಲೆಯರೆನೆ ಚೂತಂಗವಿೂಮಲ್ಲಿಕಾಕೋ |
ಮಳೆಗಂ ಕೊಂಡಾಡಿ ಕೆಯ್ನೀರೆಱೆದನತನು ಲಾವಣ್ಯಪುಣ್ಯಾಂಬುವಿಂದಂ||

ವ|| ಮತ್ತಂ.

ಮ|| ಪಗಲೆಂದುಂ ತಲೆದೋಱಲಣ್ಮಳಿನಿಸುಂ ಚಂದ್ರಂಗೆ ಕೂರ್ತಂತೆ ಪ |
ತ್ತುಗೆಗುಂದಳ್ ನಿಶೆಯಪ್ಪುದುಂ ಪರಿದು ದುಗ್ಧಾಂಭೋಧಿಯೊಳ್ ಕ ಡು
ವಳ್ ||
ನಗುವಳ್ ನೆಯ್ದಿಲೊಳೆಯ್ದೆ ಚುಂಬಿಪ ಚಕೋರಂಗಳ್ಗಳಲ್ಪಾಸೆಯಿಂ |
ಪುಗುವಳ್ ಕೌಮುದಿಯೆಂಬ ಪೊಚ್ಚ ಪೊಸವೆಣ್ಣೇನೆಂಬ ನಾಣ್ಗೇಡಿಯೋ ||
(ಇದು ನಿರಿಂದ್ರಿಯಸಂಭೋಗಂ)

ಕಂ|| ಇನನಂ ಕಾಣದೆ ಸಂಚಲ |
ತನುವಪರಾಶಾಪ್ರಪಂಚವಿರಹಿತೆ ಸಂಧ್ಯಾಂ ||
ಗನೆ ನೋಡೆನೋಡೆ ಕರಗಿದ |
ಳನುರಕ್ತೆ ವಿಯೋಗವೇಗಮಂ ಸೈರಿಪಳೇ || ೨೪೪||
(ಇದು ನಿರಿಂದ್ರಿಯ ವಿಪ್ರಲಂಭಂ)

ವ|| ಇವು ರಸಾಭಾಸಂಗಳ್, ಇವು ದೋಷಮಲ್ತು.

ಕಂ|| ಘನಮಾಲೆ ಸಮುದ್ರನ ಸಿರಿ |
ಯಿನಾದ ಗರ್ಭದೆ ಜಡಪ್ರಕೃತಿವೆತ್ತಪಳೆಂ ||
ದೆನೆ ತನುಮಧ್ಯೆಯರೇಂ ಗ |
ರ್ಭಸಿರ್ಭರಾವಸ್ಥೆಯಿಂ ಪಟುತೆವಡೆದಪರೇ || ೨೪೫||
(ಇದು ಆಲಸ್ಯಭಾವಾಭಾಸಂ)

ಕಂ|| ಅನಿರ್ದಬನದೊಳುಲಿದುವ |
ನೇನಂ ನೃಪ ನೋಟಿಪ್ಪೆ ಬರ್ಪುದೆಂಬಂದದಿನಂ ||
ದೇನುಲಿದುದೊ ಪಿಕಮಧುರ |
ಧ್ವಾನದಿನಾರಕ್ತಕೋರಕಂ ಸಹಕಾರಂ || ೨೪೬||
(ಇದು ಗರ್ವಭಾವಾಭಾಸಂ)

ಉ|| ಅಂಬುಜನಾಳಮೆಂಬ ಪೆಣೆದಾವಣಿಯಂ ಪಱಿದಾವಲೆಂಬ ಬಾ |
ಳ್ಗಂಬಮನೊತ್ತಿ ಕಿಟ್ಟು ಲತೆಯೆಂಬ ತುರಂಗಮುಮಂ ಪೊರಳ್ಚಿ ಥಾ ||
ತಾಂಬುತರಂಗಮೆಂಬ ಪರಿಕಾರನ ನಟ್ಟೆ ಮದಾಳಿಯೆಂಬ ಗುಂ |
ಡಂ ಬಳಿದಿಟ್ಟು ಪಾಯ್ದುದು ಸಮೀರಣವಾರಣವಾಪ್ರದೇಶದೊಳ್|| ೨೪೭||
(ಇದು ಉಗ್ರ ಭಾವಾಭಾಸಂ)

ವ|| ಇವು ನಿರಿಂದ್ರಿಯಭಾವಾಭಾಸಂಗಳ್.

ಮ|| ಉಗುಱುತ್ತುಂ ಸಿಡಿಲೆಂಬ ತೋರಗಿಡಿಯಂ ಕಾಲೂರಿ ಭೂಭಾಗದೊಳ್ |
ಗಗನಾಭೋಗಮನೆಯ್ದೆ ನೀಳ್ದ ಘನವೇಣೀಬಂಧಮಂ ಸಾರ್ಚಿ ವಿಂ ||
ಚುಗಳೆಂಬುಳ್ಕುವ ದಾಡೆಗಳ್ ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇ |
ಸಗೆಯಂ ಬೆರ್ಚಿಸಿ ಘರ್ಜಿಸುತ್ತುಮೊಗೆದಂ ಕಾರೆಂಬ ಕಾಳಾಸುರಂ|| ೨೪೮||

(ಇದು ನಿರಿಂದ್ರಿಯರೌದ್ರರಸ ಮೌಗ್ರ್ಯವ್ಯಭಿಚಾರಿ.)

ಚಂ|| ಎಳವೆಱೆ ದಾಡೆ ಕೆಂದಳಿರೆ ನಾಲಗೆ ಮಾಮರದಳ್ಗೆಗೊಂಬಿನೊಳ್ |
ಮಿಳಿರ್ವೆಳವಳ್ಳಿ ಬಾಲಮಲರ್ದೊಂಗಲೆ ಕೇಸರಮೆಂಬಿನಂ ಮನಂ ||
ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ |
ಗೊಳಿಸಿದುದುಷ್ಣಕೀರಮದಕೋಕಿಳಗರ್ಜಿತತರ್ಜಿತಂಗಳಿಂ || ೨೪೯||

ವ|| ಇದು ನಿರಿಂದ್ರಿಯ ಭಯಾನಕರಸ ಮೌಗ್ರ್ಯಾದಿವ್ಯಭಿಚಾರಿ, ಇಂತು ನಿರಿಂದ್ರಿಯಾನ್ಯರಸಭಾವಂಗಳನಱಿವುದು.

ವ|| ಇನ್ನು ತಿರ್ಯಗ್ಗತಕ್ಕೆ.

ಚಂ|| ಪಸಿದೊಡೆ ಸಲ್ಲಕೀಕಿಸಲಯಂಗಳನೊಯ್ಯನೆ ನೀಡಿ ತೀಂಟೆ ತಾಂ |
ಮಸೆಪಿರೆ ಕೋಡನಿಟ್ಟೊರಸಿ ನೀರ್ಗೆಳಸಿದರ್ೊಡೆ ತಂದು ನೀರನೂ ||
ಡಿಸಿ ನಸೆಯಿಚ್ಛೆಯಾದೊಡೆಡಗೂಡಿ ಬೞಿಲ್ದೊಡೆ ಕರ್ಣವಾತಮಂ |
ಪಸರಿಸಿ ತನ್ನ ಕೆಯ್ಪಿಡಿಯುವೋಲ್ ಪಿಡಿಯಂ ಪಿಡಿದಿರ್ದುದೊಂದಿಭಂ|| ೨೫೦||

ವ|| ಮತ್ತಂ.

ಚಂ|| ಪಂಪರಿತಂದು ಮೆಯ್ಗೆಳೆರಡಿಲ್ಲೆನೆ ಪಕ್ಕದಿನಪ್ಪಿ ಕಣ್ಗಳಿಂ |
ಸುರಿಯೆ ಮುದಶ್ರು ಮುಂದಲೆಯ ತುಪ್ಪುೞನೊಯ್ಯನೆ ಕರ್ಚಿ ಚಂಚುವಿಂ ||
ಸರಸಿಜಪತ್ರಕೋಟಿಯ ಕುಸುಂಕಱಿನತ್ತೆಳದುಯ್ದು ಕಾಂತನೊಳ್ |
ನೆರೆದು ರಥಾಂಗಕಾಂತೆ ಯೆರ್ದೆಯಾಱಿದುಬಾದಮೆ ಸುಪ್ರಭಾತದೊಳ್||

(ಇವು ತಿರ್ಯಕ್ಸಂಭೋಗಶೃಂಗಾರಾಭಾಸಂ.)

ಉ|| ನಲ್ಲರಗಲ್ಕೆಯಿಲ್ಲದೆಡೆ ಯಸ್ತಮಯಕ್ಕೆ ದಿನಾಧಿನಾಯಕಂ |
ಸಲ್ಲದ ತಾಣವಂಗಜಶರಾಶನಿ ಪೊಯ್ಯದ ದೇಶಮುಳ್ಳೊಡಂ ||
ತಲ್ಲಿಯೆ ಮಾೞ್ಕೆ ಮಜ್ಜನನಮಂ ಬಿದಿಯೆಂದು ರಥಾಂಗಕಾಂತೆ ಹೃ |
ದ್ವಲ್ಲಭವಿಪ್ರಲಬ್ಧೆ ಬಗೆಗೆಟ್ಟು ಪೊರಳ್ದುದು ಪದ್ಮಪತ್ರದೊಳ್ || ೨೫೨||

ಮಾಲಿನೀವೃತ್ತಂ॥ ಬಿಸರುಹಸಖನಸ್ತಾಂದ್ರೀಂದ್ರಮಂ ಪೊರ್ದೆ ಪೋದಯ್ ।
ಬೆಸದಿನಿಯನೆ ನೀನುಂ ತನ್ನ ಬೆಂಬೆನ್ನೊಳಿನ್ನೀ ॥
ಯಸುವುಮಿರದೆ ಪೋಗಲ್ಕಿರ್ದುದೆಂದಿಂತೊಱಲ್ಗುಂ ।
ಕುಸುಮಶರಶಲಾಕಾಕೀಲಿತಾಂಗಂ ರಥಾಂಗಂ ॥ ೨೫೩॥

(ಇದು ತಿರ್ಯಗ್ವಿ ಪ್ರಲಂಭಶೃಂಗಾರಾಭಾಸಂ)

ಚಂ॥ ಅಱುತೆರ್ದೆಯಾಱೆ ಪೀರ್ದುವಿುಸಿಯಳ್ಗನಿದೆಂದಿರದೀಂಟವೇೞ್ದುಮ ।
ಟ್ಟಿಱುಮಱುವಂತೆ ಮುಕ್ಕುಳಿಸಿ ತಂದೆಱೆಗುಂ ಕೆಳೆವಕ್ಕಿಯೆಲ್ಲವಂ ॥
ನೆಱೆ ಬಱಿಯಟ್ಟಿ ನಲ್ಲುಣಿಸನೂಡಿಯುಮಾಮ್ರದ ತೋರವಣ್ಗಳಿಂ ।
ದಱಿಸಿದುದಂತು ಗಾಣದೆರ್ದೆನೊಂದು ಶುಕಂ ಮಧುಸಮ್ಮದೋತ್ಸುಕಂ॥

(ಇದು ಔತ್ಸುಕ್ಯಂ)

ಮ॥ ಗಿಡುಗಂ ಕೊಂದುದೊ ಬೇಡರಿಟ್ಟ ಬಲೆಯೊಳ್ ಮೇಣ್ ಬಿೞ್ದುದೋ ಪಕ್ಕ ಮೇ ।
ನುಡಿದತ್ತೋ ಪಿಡಿದನ್ಯಸಾರಿಕೆ ರತವ್ಯಾಪಾರಕೆಂದೊಯ್ದಳೋ ।
ತಡೆದಂ ಮತ್ಪ್ರಿಯನೆಂದು ನೊಂದು ತಳಿರ್ಗಳ್ ನಾಂಬನ್ನೆಗಂ ದುಃಖದಿಂ ।
ಗಡ ಕೀರಪ್ರಿಯಕಾಂತೆ ಸುಯ್ದು ಸುರಿದಳ್ ಘೋರೆಂದು ಬಾಷ್ಪಾಂಬುವಂ॥

(ಇದು ವಿತರ್ಕಚಿಂತಾಸಂಧಿ)

ವ॥ ಮತ್ತಂ.

ಮ॥ ನೆರೆವನ್ನಂ ರವಿ ನಿಲ್ಲದಸ್ತಗಿರಿಯಂ ಸಾರ್ದಂ ಪ್ರಿಯಂ ಪೋಗಲಾ ।
ತುರನಾಗಿರ್ದನೆನುತ್ತಮತ್ತಿನನಸಿತಾತ್ಮೇಶನಂ ನೋಡಿ ಕೋ ॥
ಪರಸಾವೇಶಮನೊಂದು ಶೋಕರಸಮಂ ಮತ್ತೊಂದು ಕಣ್ ಕೆಯ್ಕೊಳು ।
ತ್ತಿರೆ ಕೆಯ್ಕೊಂಡುದು ಚಕ್ರವಾಕವಧು ಕಣ್ಗೆತ್ತಂ ನಟೀಲೀಲೆಯಂ॥ ೨೫೬ ॥

(ಇದು ತಿರ್ಯಗ್ಭಾವಸಂಧಿ)

ಇಂತಿವೆಲ್ಲಂ ಭಾವಾಭಾಸಂ.

ವ॥ ಆದಿಶಬ್ದದಿಂ ರಜನೀರಜನೀಪತಿ ಸಂಭೋಗಕ್ಕೆ.

ಕಂ॥ ಪರೆದಿರೆ ತಿಮಿರಕಚಂ ನೆರೆ ।
ದಿರೆ ಭಗಣಸ್ವೇದಜಲಕಣೌಘಂ ರಾಗಂ ॥
ಬೊರೆದಿರೆ ಚಕೋರನಯನಂ ।
ಕರಮೆಸೆದಳ್ ನೆರೆದು ರಜನಿ ರಜನೀಪತಿಯೊಳ್ ॥ ೨೫೭ ॥

ವ|| ಮತ್ತಂ.

ಚಂ|| ಪೊಸಮಕರಂದಮೆಂಬ ಬೆಮರುಣ್ಮಿರೆ ತೆಂಬೆಲರೆಂಬ ಸುಯ್ಯೆಲರ್ ॥
ಪಸರಿಸೆ ಗುಚ್ಛಮೆಂಬ ಮೊಲೆ ಚಪ್ಪಲದೋರ್ಪ್ಪೆ ಸಿತಾಬ್ಜಮೆಂಬ ಕಣ್ |
ಮಿಸುಪ ಪರಾಗಮೆಂಬ ನಸುಗೆಂಪಿನೊಳೊಂದಿರೆ ನೋಡೆ ಕಣ್ಗೆ ಶೋ |
ಭಿಸಿದಳಲಂಪಿಸಿಂ ನೆರೆದು ನಂದನಲಕ್ಷ್ಮಿ ವಸಂತಕಾಂತನೊಳ್ ॥ ೨೫೮||

ಇಂತಿವು ರಸಾಭಾಸಂಗಳ್.

ಇಂತಱಿವುದು.

ಚಂ|| ಅಮೃತದ ಖಂಡಶರ್ಕರೆಯ ಕೂಟಮುಮೊಲ್ದಳ ಕೂಟಮುಂ ಸಮಾ |
ನಮೆಯೊಲವಿಲ್ಲದಳ್ಗೆ ವಿಟನೇಟವಿಟಂ ಬರೆ ಕೂಟವಿಂಪನೀ ॥
ಗುಮೆ ಬೆಲೆಗೊಂಡನಾ ಬೆಲೆಗೆ ಮೆಯ್ಯರೆಯೋಯ್ವನಗಿತ್ತೆನೆಂಬ ಕೂ |
ಟಮನದನೊಂದು ಕೂಟಮೆನಲಕ್ಕುಮೆ ನಂಜಿನ ಕಾಲಕೂಟಮುಂ ॥ ೨೫೯||

(ಇದುವುಮೇಕತ್ರಾನುರಾಗದಿಂ ರಸಾಭಾಸಮುಪ್ಪದು)

ವ|| ಇಂತು ತುಂದಿಲಮೈಥುನಂ, ನೀಚ ಶಬರ ಚೇಟೀ ಚೇಟ ಪರಮ ದರಿದ್ರಾದಿಗಳ್ ನೆಗಳ್ದ ಕೋಟಿಸುಸಿಲೆಲ್ಲಂ ರಸಾಭಾಸಂಗಳೆಂದಱಿವುದು.

ಸಮಾಸೋಕ್ತಿ ಯರ್ಥಾಂತರನ್ಯಾಸಂ, ರೂಪಕ ಮುತ್ಪ್ರೇಕ್ಷಾದಿಗಳೀ ರಸಭಾವಾಭಾಸಕ್ಕೆ ಜೀವಿತಂ.

ಇನ್ನಾ ಸಾತ್ವಿಕವಿಚಾರಂ

ಲೇಸಾದ ಸತ್ವಗುಣೋತ್ಕರ್ಷದಿಂ ಪ್ರಾಣಸ್ವರೂಪಮಾದ ವಸ್ತುವೆ ಸತ್ವಂ, ಅಲ್ಲಿ ಪುಟ್ಟಿದುವೇ ಸಾತ್ವಿಕಂಗಳ್, ಅವು ಪ್ರಾಣಭೂಮಿಪ್ರಸೃತ ರತ್ಯಾದಿಗಳನಱಿಯುವ ವೃತ್ತಿಗಳನುಳ್ಳವು. ಬಾಹ್ಯಜಡರೂಪಪಂಚಭೂತಾತ್ಮಕಂಗಳಾದ ಅಶ್ರುಸ್ವೇದಾದಿಗಳೇ ಕಾರಣಂಗಳವಱಿಂ ತಾವು ವಿಲಕ್ಷಣಂಗಳಪ್ಪವು. ಅತ್ಯಂತರಸೀಭವಿಸಿದ ರತ್ಯಾದಿಗಳ ವಿಭಾವಂಗಳಿಂ ಪುಟ್ಟಿದುವನು ಭಾವಂ[ಗಳಿಂ ಗಮ್ಯಮಾನಮಾನಂಗಳಾಗಿ ಭಾವಂಗ]ಳೆಂದಱಿಯಿಸಿಕೊಳ್ವವು. ಮತ್ತಮಾತ್ಮಸ್ಥಿತಮಾದ ಪಂಚಭೂತದೊಳ್ ಪೃಥ್ವೀಪ್ರಧಾನಮಾದ ಪ್ರಾಣದೊಳ್ ಚಿತ್ತವೃತ್ತಿಗಳ್ ಬೆರಸಲೊಡನಾತ್ಮನ ಚಲನಾಗಿರ್ಪನದೇ **ಸ್ತಂಭ** ಸಾತ್ವಿಕಭಾವಂ, ಜಲಪ್ರಧಾನಮಾದ ಪ್ರಾಣದಲ್ಲಿ ಸ್ವಾಂತಂಗಳ್ ಪ್ರವರ್ತಿಪುದು **. ಅಶ್ರು**ಭಾವಮಕ್ಕುಂ. ತೇಜಃ ಪ್ರಧಾನಮಾದ ಪ್ರಾಣದಲ್ಲಿ ಹೃದ್ವರ್ತನಮಿರೆ **ವೈವರ್ಣ್ಯ** ಮಕ್ಕುಂ. ಆಕಾಶಪ್ರಧಾನಮಾದ

ಪ್ರಾಣದಲ್ಲಿ ಹೃದ್ವರ್ತನವಿಂತು ಲಯಸಾತ್ವಿಕಮಕ್ಕುಂ. ವಾಯುಪ್ರಧಾನಮಾದ ಪ್ರಾಣದಲ್ಲಿ ಚೇತಸ್ಸಂಧಾನಮಾಗೆ ಮಂದಮಧ್ಯೋತ್ಕೃಷ್ಟ ವೇಗಂಗಳಿಂ **ರೋಮಾಂಚ, ಕಂಪ, ಸ್ವರಭೇದತ್ರಿತಯಮಕ್ಕುಂ.** ಈ ಬಾಹ್ಯಸಾತ್ವಿಕಂಗಳ್ಗಂತರಂಗದ ಸಾತ್ವಿಕಂಗಳ್ ಕಾರಣಮಾದುದಱಿಂದೀಪೆಸರ್ಗಳಂ ತಾವುಂ ತಳೆದುವು.

ಭರತಮತವಿಂತು.

ಬಾಹ್ಯಂಗಳಾದ ಅಶ್ರುಸ್ತಂಭಾದಿಗಳ್ ಶರೀರಧರ್ಮಂಗಳ್, ಅಂತರಂಗಸಾತ್ವಿಕಂಗಳ್ ಸಂದನು ಭಾವಂಗಳ್, (ಅದಱಿಂದಮನುಭಾವಂಗಳೊಡ ವೆರಸಿರ್ಪುವು.) ಇವು ಹೃದ್ಗತಮಾದ ಸಾತ್ವಿಕಂಗಳುಮಂ, ರತ್ಯಾದಿಸ್ಥಾಯಿಗಳುಮಂ, ಮತ್ಯಾದಿ ವ್ಯಭಿಚಾರಿಗಳುಮನಱಿಯಿಪ್ಪುವು, ಆಸ್ಥಾಯಿಭಾವವೊಂಭತ್ತು, ಸಾತ್ವಿಕ ಭಾವಮೆಂಟು, ಸಂಚಾರಿಭಾವಂ ಮೂವತ್ತುಮೂಱು. ಇಂತಯ್ವತ್ತುಭಾವಂ.

ವಿಭಾವಬಲದಿಂದಾಮೆಯ್ನವಿರುರ್ವಿದುದೇ **ಪುಳಕಂ,**[1] ಕಣ್ಬನಿತೋಱಿದುದೇ **ಅಶ್ರು,**[2] ಮೆಯ್ಮಱೆದುದೇ **ಲಯಂ,**[3] ಧ್ವನಿಪಲ್ಲಟಿಸಿದುದೇ **ಸ್ವರಭೇದಂ,**[4] ನಡುಗುವುದೇ **ಕಂಪಂ,**[5] ಬೆಮರ್ತುದೇ **ಸ್ವೇದಂ,**[6] ಮತ್ತೊಂದು ಬಣ್ಣಮಾದುದೇ **ವೈವರ್ಣ್ಯಂ,**[7] ಮರವಟ್ಟುದೇ **ಸ್ತಂಭಂ**[8].

ಇಂತು ಚಿತ್ತತ್ವದಿನೆಲ್ಲಾರಸಂಗಳ್ಗಪ್ಪುವಿವಂ ವ್ಯಭಿಚಾರಿಗಳನನುಭಾವಂಗಳೊಡನೆಯು ಹೇಮಚಂದ್ರಚಾರ್ಯರ್ ಪೇೞ್ದರ್, ಅಂತೆಗೆಯ್ದಂ.

ವ॥ **ಮತ್ತಂ ಸಾತ್ವಿಕಭಾವಮೆಂಟುಪ್ರಕಾರಕ್ಕಂ ಕಾವ್ಯಮಾರ್ಗದೊಳುದಾಹರಣಮುಖದೊಳಱಿದುಕೊಳ್ಗೆ.***
ಶೃಂಗಾರದೊಳಳವಟ್ಟುದ ನುದಾಹರಿಪೆಂ —

ಸೂತ್ರಂ ೧೪೪.

ಕಂ॥ ಪುಳಕಾಶ್ರುಸ್ತಂಭ ಸ್ವೇ।
ದಳಯ ಸ್ವರಭೇದಕಂಪವೈವರ್ಣ್ಯಂಗಳ್ ॥
ಸಲೆ ಸಾತ್ವಿಕಭಾವಂಗಳ್।
ವಿಳಸಿತಕವಿಮಾರ್ಗದಿಂದಮೆಂಟುತೆಱಂಗಳ್ ॥

* ಇಲ್ಲಿಂದ ಮುಂದಣ ಸಾತ್ವಿಕಭಾವೋದಾಹರಣಂಗಳು ಕೆಲವು ಪ್ರತಿಗಳಲ್ಲಿಲ್ಲ.

ಲಕ್ಷ್ಯಂ.

ಕಂ|| ಇನಿಯಂ ಸೋಂಕಲೊಡಂ ಝುಂ ।
ಮನೆ ಕಡವಲರ್ದಂತೆ ಕಾಂತೆ ತಾಳ್ದಿದ ರೋಮಾಂ ||
ಚನಕೆ ತನಿವೇಟವಳ್ಳಿಯ |
ನನೆಗಂಗಜನೀಯಸಂಕೆಱೂ ಕಂಟಕವೆಸದಂ ॥ ೨೬೦||

(ಇದು ಪುಳಕಂ)

ಕಂ। ಸುರಿದಬಲೆ ಕಣ್ಣ ನೀರ್ಗಳ |
ಸರಿಯಂ ಸ್ತನಮುಂಡಳಂಗಳೊಳ್ ವಿರಹಮುಹಾ ||
ಜ್ವರಜನಿತಪುಳಕಸಸ್ಯಾಂ |
ಕುರಂಗಳಂ ಬೆಳೆಯಿಸಳ್ ನಭೋಲಕ್ಷ್ಮಿಯವೋಲ್ ॥ ೨೬೧||

(ಇದು ಅಶ್ರು)

ಚಂ|| ಇನಿಯನ ಕೆಂಪಳಂ ತಳಮುನೊಯ್ಯನೆ ಸೋಂಕೆ ಪೊಸಟ್ಟು ನಾಣ ಪೆಂ |
ಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನವಿತಾನನಾಬ್ಜ ಬೆ ॥
ಚ್ಚನೆ ಬಸಿಯುತ್ತುಮಿಂದುಕರಸಂಕುಳಮೊಯ್ಯನವುಂಕಿ ಸೋಂಕೆ ಸೋಂ|
ಕಿನೊಳೊಱಿವಿಂದುಕಾಂತಮಣಿಪುತ್ರಿಕೆಯಂಪಡಿನೊಪ್ಪಿ ತೋಱಿದಳ್ ॥

(ಇದು ಸ್ವೇದಂ)

ಚಂ|| ನಸುದೆಱಿವಿರ್ದ ಬಾಯ್ ನಿಮಿರ್ದ ಗೋಣೆಮೆಯಿಕ್ಕದ ದಿಟ್ಟಿ ರಯ್ಯನೊಂ |
ದೆಪೆಗೊಱಗಿರ್ದ ಮೆಯ್ ಜಘನದಲ್ಲಿಯ ಕೆಯ್ ಮುರವಟ್ಟ ಚೇಷ್ಟ ಕ ||
ಣ್ಗೆಸೆದಿರೆ ಸುಯ್ಯ ಪೆಂಪಱಿದು ಚಿತ್ರದ ಪೆಣ್ಣವೊಲಾಗಿ ಬಾಗಿಲೊಳ್|
ಸಸಿಮುಖಿ ನಿಂದು ನೋಟ್ಪಳಿಸಿಯಂ ತಡೆದೊಯ್ಯನೆ ಬರ್ಪ ಬಟ್ಟೆಯಂ ||

(ಇದುಸ್ತಂಭಂ)

ಚಂ|| ಮಿಗೆ ಸುರತಾಮೃತಂಗುಡಿದು ತನ್ನೊಳೆ ತಾಂ ಲಯಮಾಯ್ತೊ ಯಿಂಪಿನೊ |
ಳ್ಪೊಗೆದಧರಸ್ಥಸಾರದೊಡನೆನ್ನಯ ಹೃದ್ಗುಹೆಪೊಕ್ಕಡಂಗಿತೋ ||
ಬಗೆವೊಡೆ ಘರ್ಮವಾರಿಯೊಡನೇಂ ಪೊಱಸಾರ್ದುದೊ ಕಾಣೆನೋಪ
ನೊಳ್ |
ಬಗೆಯ ವಿಕಾರಮಂ ತನುಗೆ ಚಂದನದಣ್ಕೆವೊಲಾದವೊಪ್ಪಿದಳ್ ॥ ೨೬೪||

(ಇದು ಲಯಂ)

ಕಂ|| ಸ್ಮರನಸಿಯ[ಳ] ಬೀಣೆಯ ನು |
ಣ್ಚರವೆನೆ ಸತಿ ಪಾಡುತಿರ್ಪುದುಂ ನುನದನ್ನಂ ||
ಬರೆ ಬಂದುದೆಯ್ದೆ ಕಾಮಾ |
ತುರೆಗೆ ಮನಂಗೊಳ್ವ ಗದ್ಗದಸ್ವರಮಾಗಳ್ || ೨೬೫||

(ಇದು ಸ್ವರಭೇದಂ)

ಕಂ|| ಲಲನೆ ನಿಜೇಶ್ವರನಂ ಕಾ |
ಣಲೊಡಂ ಕಟ್ಟಿದಿರೊಳಿರ್ದಪವೆ ಭಯಮಾದಳ್ ತೆಂ ||
ಬೆಲರಿಂದಲ್ಲಾಡುವ ಕೋ |
ಮಲಲತಿಕಾಲೀಲೆಯಂ ತಳೋದರಿ ತಳೆದಳ್ || ೨೬೬||

(ಇದು ಕಂಪಂ)

ಕಂ|| ಇನಿಯನ ವಿಯೋಗದಿಂದಾ |
ದ ನಿನ್ನ ಬಡತನಮುನಱಿವುದರಿದಾಯ್ತೆನಸುಂ ||
ಘನತರಚಂದ್ರಕಳಾಬಿಸ |
ವನದಂತಿರೆ ನಿನ್ನೊಳಾದುದೀವೈವರ್ಣ್ಯಂ || ೨೬೭||

(ಇದು ವೈವರ್ಣ್ಯಂ)

ಕಂ|| ಇಂದುವರಮಾರುಮೀರೀತಿಯಿ |
ದಿಂದಂ ಕನ್ನಡದೊಳಾರ್ಯರಾ ಎಂಬಿನವೊ ||
ಳ್ಪಿಂದೆ ವಿವರಿಸಿದುದಿಲ್ಲೆನೆ |
ಚಂದದೆ ಬಿಚ್ಚಳಿಸಿ ರಚಿಸಿದಂ ಕವಿಸಾಳ್ವಂ || ೨೬೮||

ಕಂ|| ಈಕೃತಿಕವಿಕೃತನುತಕವಿ |
ತಾಕಾಂತೆಗೆ ತಾನೆ ನವರಸಂ ಸಲೆ ರಸರ ||
ತ್ನಾಕರಮಿಳೆಶಶಿರವಿರ |
ತ್ನಾಕರಮಿರ್ಪನ್ನೆಗಂ ಜಯಿಕ್ಕುರ್ವರೆಯೊಳ್ || ೨೬೯||

## ಗದ್ಯ

ಇದು

ಶತೇಂದ್ರ ಮುನೀಂದ್ರವಂದಿತಾರ್ಹತ್ಪರಮೇಶ್ವರ

ಪಾದಾರವಿಂದಾಮಂದಮಕರಂದಾನಂದಿತಭೃಂಗಾಯಮಾಣ

**ಸಾ ಳ್ವ ಕ ವಿ**

ವಿರಚಿತಮಪ್ಪ.

**ರಸರತ್ನಾಕರದೊಳ್**

ವ್ಯಭಿಚಾರಿಭಾವವಿವರಣಂ.

**ಚ ತು ರ್ಥ ಪ್ರ ಕ ರ ಣಂ**

---

ರ ಸ ರ ತ್ನಾ ಕ ರಂ

ಸಮಾಪ್ತಂ

ಮಂಗಳಮಸ್ತು

ಶ್ರೀ

ಪರಿಶಿಷ್ಟಂ—೧.

ಕವಿಸಾಳ್ವವಿರಚಿತಂ.

# ಶಾರದಾವಿಲಾಸಂ.

## (1) ದ್ವಿತೀಯಂ ಧ್ವನಿಪ್ರಕರಣಂ.

ವಚನಂ|| ಮತ್ತಂ ಕಾವ್ಯವಿಶೇಷಭೇದಂಗಳಂ ಪೇಳ್ವಪೆಂತೆಂದೊಡೆ—

ಸೂ|| ಆವೆಡೆಯೊಳಂ ವಾಚ್ಯದತ್ತಣಿಂದಧಿಕಮಪ್ಪ ವ್ಯಙ್ಗ್ಯಮನುಳ್ಳುದು**ತ್ತಮ** ಕಾವ್ಯಂ. ಆಕಾವ್ಯಮುಂ "**ಧ್ವನಿ**" ಯೆಂದು ಪೂರ್ವಾಚಾರ್ಯರಿಂ ಪೇಳಿಪಟ್ಟುದು.

ಧ್ವನಿಗುದಾಹರಣೆ.

ಚಂ|| ಎಲೆ ಗಡ ಪಾಂಥ ಕೆಯ್ಗೆಮರ್ದ ಪುಸ್ತಕಮೇಸಿದು ಪೃಚ್ಛೆಯೇಳ್ವಿಯೋ |
ವಿಲಸಿತವೈದ್ಯಕೋವಿದನೊ ನಿಲ್ ನಡ ವೈದ್ಯನೆಯಾದೊಡತ್ತೆ ಪೇಳ್ ||
ಸಲೆ ನಿಶೆಯಲ್ಲಿ ಕಾಣಳೀತಾಷಧಿಯೇಳ್ ಪತಿಯೂರ್ಗೆ ಪೋಗಿ ತಾಂ |
ನೆಲಸಿದನಲ್ಲಿ ಬರ್ಪ ದಿನಮಾವುದು ಪ್ರಾಶ್ನಿಕನಾದೊಡಂತೆ ಪೇಳ್ || ೧||

ಸೂ|| *ಆವುದಾನೊಂದೆಡೆಯೊಳ್ ವಾಚ್ಯಾರ್ಥದತ್ತಣಿಂದನತಿಶಯಮಾಗಿ ತೋರುತಿರ್ಪ ವ್ಯಙ್ಗ್ಯಮನುಳ್ಳುದು **ಮಧ್ಯಮಕಾವ್ಯಂ.**

---

1.[*] ಈಗ್ರಂಥದ ಎರಡನೆಯ ಪ್ರಕರಣಮಾತ್ರ ಪ್ರಕೃತದಲ್ಲಿ ಉಪಲಬ್ಧವಾಗಿರುವುದರಿಂದ ಪೂರ್ಣವಾದ ಈ ಗ್ರಂಥವನ್ನು ಬೇರೆಯಾಗಿ ಮುದ್ರಿಸಲು ಅವಕಾಶವಿಲ್ಲ ಕನ್ನಡದಲ್ಲಿ ಅಪೂರ್ವವೂ ಅತ್ಯಂತಪ್ರಯೋಜನಕಾರಿಯೂ ಆದ ಈ ಗ್ರಂಥಭಾಗವು ಲುಪ್ತವಾಗಿ ಹೋಗಕೂಡದೆಂದು ಉಪಲಬ್ಧವಾದಷ್ಟುಭಾಗವನ್ನು ಪರಿಶಿಷ್ಟದಲ್ಲಿ ಮುದ್ರಿಸಿದೆ.

*ಇಲ್ಲಿ ಧ್ವನಿಯ ಉದಾಹರಣವನ್ನು ಸಮನ್ವಯಮಾಡುವ ವಾಕ್ಯವು ಬಿಟ್ಟುಹೋಗಿರುವಂತೆ ಕಾಣುವುದು.

ಮಧ್ಯಮಕಾವ್ಯಕ್ಕುದಾಹರಣೆ.

ಚಂ|| ನಡೆವ ಸುವರ್ಣಪುತ್ರಿಕೆಯಿದೆಂದೆನೆ ನೀರ್ವೊಱೆಗೊರ್ವಳೆಯ್ತಿಯಿಂ |
ಪಡಿಯಿಡುವನ್ನೆಗಂ ಪಥದಿನೊಯ್ಯನೆ ಹಬ್ಬೆಯದೋಂದು ದಂಡನುಂ ||
ಪಿಡಿದಿದಿರ್ವರ್ಪನಂ ಪದೆದು ಸಿಟ್ಟಿಸಿ ಮೆಯ್ಮರವಟ್ಟಳೆಯ್ತಿಯಿಂ |
ತಡಬಡಿಸುತ್ತೆ ನಿಂದು ಪೞಗಾಜಿನ ಪುತ್ತಳಿಯಂತಿರೊಪ್ಪಿದಳ್ ||

ವಿವರಣಂ.

ವ|| ಇಲ್ಲಿ ಹಬ್ಬೆಯಂಕೊಂಡಿದಿರ್ವರ್ಪನಂ ಕಂಡು ಕಾಂತೆ ಕಂಪಿಸಿದಳೆಂಬ ವಾಚ್ಯಾರ್ಥದತ್ತಣಿಂ ಸಂಕೇತಗೃಹದಿಂ ಮರಳಿದನೆಂಬ ವ್ಯಙ್ಗ್ಯಾರ್ಥಂ (ವಾಚ್ಯಾರ್ಥಮಂ) ಮಿಱಿದು - ಮತ್ತಮುದರ್ಕ.

ಚಂ|| ವಿಮಳತೆವೆತ್ತ ನೀರ್ವೊಱೆಯ ತೀರದೆ ಚಾರುನಿಕುಂಜಪಙ್ತಿಯೊಳ್ |
ಸಮುಸಿಸೆ ಜೇಗೆಗಿಚ್ಚುಳುರ್ವ ಕೇಸುರಿಯಾಸುರಮಾಗೆ ಕಂಡು ವಿ ||
ಭ್ರಮಮಱಿದಿರ್ಪಗುಂದಿ ಬಳಿಱಿಂ ಪೊಸೆದೊತ್ತಿನೊಳೊಂದಿ ನಿಂದರಂ |
ತೆಮರಿ ತೆರಳ್ವ ಕಾರ್ಯಮಣಮಿಲ್ಲದೆ ಬಿಣ್ಪಱಿದೊರ್ವಳೊಪ್ಪಿದಳ್ || ೩||

ವಿವರಣಂ.

ವ|| ಇಲ್ಲಿ ತನ್ನ ಸಂಕೇತಸ್ಥಾನಮೞಿದುದೆಂಬ ವ್ಯಙ್ಗ್ಯಂ ವಾಚ್ಯಮಂ ಮಿಱಿಲಾಱದು.

ಸೂ|| ಶಬ್ದಾರ್ಥೋಭಯಚಿತ್ರಮಾಗಿ ವ್ಯಙ್ಗ್ಯರಹಿತಮಪ್ಪುದಧಮಕಾವ್ಯಂ.

ಇದಕ್ಕುದಾಹರಣೆ.

ಮ|| ಅತುಳೋತ್ತಾಳತಿಮಿಂಗಿಳಪ್ರಬಳಪಕ್ಷೋದ್ಧೂತವಾತಪ್ರಕಂ |
ಪಿತಕುತ್ಕೀಲಸಮುಗ್ರವಿಗ್ರಹಘನಗ್ರಾಹಗ್ರಹವ್ಯಗ್ರವಿ ||
ಗ್ರತವಕೋದರಭಾಗಭೂರಿಕಮಠಪ್ರಕ್ಷಿಪ್ತಕಲ್ಲೋಲಕ |
ಲ್ಪಿತಕೋಳಾಹಳಕಲ್ಪಕಾಲರಭಸಪ್ರಸ್ಪರ್ಧಿಯಂ ವಾರ್ಧಿಯಂ || ೪||

ಮ|ಸ್ರ||ಎಳನೀರಂ ತೆಂಗು ರಂಭಾಪ್ರತತಿಗೆಱೆಯೆ ರಂಭಾಳಿಗಳ್ ತಮ್ಮ ನೀರಾ |
ವಳಿಯಂ ಪುಂಡ್ರೇಕ್ಷುವಾಟಾವಳಿಗೆ ಸುರಿಯೆ ಪುಂಡ್ರೇಕ್ಷುಗಳ್ ತಮ್ಮ ನೀರಂ||
ಕಳಮಕ್ಷೇತ್ರಕ್ಕೆ ಪೂರಂಬರಿಯಿಸೆ ಕಳಮಶ್ರೇಣಿಗಳ್ ತಮ್ಮ ಪಾಲಂ |
ಗಿಳಿವಿಂಡಿಂಗೀಯೆ ಚೆಲ್ವಾದುದು ಪುರಬಹಿರುದ್ಯಾನಕೇದಾರಜಾಳಂ || ೫||

ಉ|| ಕೊಂಕಣಚಕ್ರವರ್ತಿ ಜಯಕೇಶಿನೃಪಾಲನೊಳಾಂತ ಭೂಭುಜರ್ |
ಕಂಕಣಚಿತ್ರಪತ್ರಘನಮಾರ್ಗಣಸಂಯುತರಾದರಾನತರ್ ||
ಕಂಕಣಚಿತ್ರಪತ್ರಘನಮಾರ್ಗಣಸಂಯುತರಾದ ರೋಡಿದರ್ |
ಕಂಕಣಚಿತ್ರಪತ್ರಘನಮಾರ್ಗಣಸಂಯುತರಾದರದ್ಭುತಂ || ೬||

ಶಬ್ದಾರ್ಥಸ್ವರೂಪನಿರೂಪಣಂ. (ಶಬ್ದವೃತ್ತಿವಿವರಣಂ.)

ವ|| **ವಾಚಕ, ಲಕ್ಷಕ, ವ್ಯಂಜಕ,** ಮೆಂದು ಶಬ್ದಂ ಮೂದೆಱಂ. ಅವರ್ಕೆ ವಿಷಯಮಾದರ್ಥಂ **ವಾಚ್ಯ, ಲಕ್ಷ್ಯ, ವ್ಯಙ್ಗ್ಯ** ಮೆಂದು ತ್ರಿವಿಧಂ. ಮಱಿ ಯಿಲ್ಲದೆ ಸಂಕೇತದಿಂದರ್ಥಮನಱಿಪುವುದು **ವಾಚಕಂ,** ಅದು **ಜಾತಿ, ಗುಣ, ಕ್ರಿಯಾ, ದ್ರವ್ಯ ಯದೃಚ್ಛಾ** ಶಬ್ದಮೆಂದಯ್ದುತೆಱಂ.--ಅದರ್ಕುದಾಹರಣೆ—ಪರ್ವತಂ, ಕೆಂಪಂ, ದೇವಾಲಯಕೆ ಪೋಗುತುಂ, ದಂಡಿ, ವಿಷ್ಣುಶರ್ಮಂ. ಶಬ್ದಕರೆಬರ್ ಸಾಮಾನ್ಯದಲ್ಲಿ ಸಂಕೇತಮಂ ಪೇೞ್ವರ್ [ಅರೆಬರ್ ವಿಶೇಷದೊಳ್ ಪೇೞ್ವರ್] ಅರೆಬರುಭಯದಲ್ಲಿ (ಸಂಕೇತಮಂ) ಪೇೞ್ವರ್, ಅವಱೊಳ್ ಕಥಂಚಿತ್ಸಾಮಾನ್ಯಂ, ಕಥಂಚಿದ್ವಿಶೇಷಂ, ಕಥಂಚಿದುಭಯಮೆಂಬುದೆಮಗಂಗೀಕಾರ್ಯ್ಯಂ, ತದ್ವಿಸ್ತರಮಂ ಗ್ರಂಥವಿಸ್ತರ ಭಯದಿಂ ಪೇೞ್ದುದಿಲ್ಲ, ಬೇಕಾದವರ್ (1) "ಕಾವ್ಯಪ್ರಕಾಶಿಕೆ" "ಸಾಹಿತ್ಯ ಸುಧಾರ್ಣವಂ" ಮುಂತಾದುವಱೊಳ್ ನೋಡಿಕೊಳ್ವುದು.

ಸೂ|| ಮುಖ್ಯಾರ್ಥಬಾಧೆಯಾಗೆ, ತದ್ಯೋಗಮುಂಟಾಗೆ, ರೂಢಿಪ್ರಯೋಜನದತ್ತಣಿಂದರ್ಥಾಂತರಮಂ ತೋರ್ಪುದು ಲಕ್ಷಕಮೆನಿಕ್ಕುಂ. [ವ್ಯಙ್ಗ್ಯಮಿಲ್ಲದುದು ರೂಢಿಯೆನಿಕ್ಕುಂ] ವ್ಯಙ್ಗ್ಯಸಹಿತಮಾದುದು ಪ್ರಯೋಜನಮೆನಿಕ್ಕುಂ.—

ರೂಢಿಗುದಾಹರಣೆ—ಕುಶಲಪ್ರವೀಣಾದಿಕಂಗಳ್, **ಕುಶಲ**ನೆಂದು ಪುಲ್ಗೊಯ್ವನ ಪೆಸರ್, ಅದಂ ಬಾಧಿಸಿ ಚದುರಂಗೆ ನಾಮಮಾದುದು ಪ್ರವೀಣನೆಂದು ಒಳ್ಳಿಯವೀಣೆಯುಳ್ಳವನ ಪೆಸರ್, ಅದಂ ಬಾಧಿಸಿ ಒಳ್ಳಿಯ ಪ್ರಾಢಂಗೆ ನಾಮಮಾದುದು.

---

(1) ಕಾವ್ಯಪ್ರಕಾಶಿಕೆಯೆಂಬುದು ಪ್ರಸಿದ್ಧವಾದ ಸಂಸ್ಕೃತಭಾಷೆಯ ಅಲಂಕಾರ ಗ್ರಂಥವು. ಸಾಹಿತ್ಯಸುಧಾರ್ಣವವೆಂಬುದು ಅಪ್ರಸಿದ್ಧವು. ನಮಗೆ ತಿಳಿದ ಮಟ್ಟಿಗೆ ಅದರ ವಿಷಯವು ಇನ್ನೂ ಪ್ರಕಟವಾಗಿಲ್ಲ.

**ಪ್ರಯೋಜನ ಲಕ್ಷಣೆಯ** ವಿವರಣಮಂ ಪೇೞ್ವೆ ನದೆಂತೆಂದೊಡೆ (೧) **ಉಪಾದಾನಲಕ್ಷಣೆ**ಯೆಂದುಂ, (೨) **ಲಕ್ಷಣಲಕ್ಷಣೆ**ಯೆಂದುಂ, (೩) **ಗೌಣ ಸಾರೋಪಲಕ್ಷಣೆ** ಯೆಂದುಂ (೪) **ಗೌಣಸಾಧ್ಯವಸಾನಲಕ್ಷಣೆ** ಯೆಂದುಂ (೫) **ಶುದ್ಧಸಾರೋಪಲಕ್ಷಣೆ** ಯೆಂದುಂ (೬) **ಶುದ್ಧಸಾಧ್ಯವಸಾನಲಕ್ಷಣೆ** ಯೆಂದುಂ ಪ್ರಯೋಜನಲಕ್ಷಣೆಗಳಾಱುತೆಱಂ, ಅವು ಗೂಢಾಗೂಢ ಭೇದದಿಂ ಪನ್ನೆರಡುತೆಱಂ.

(೧) **ಅಲ್ಲಿಯುಪಾದನಲಕ್ಷಣೆ ಯೆಂತೆಂದೊಡೆ**--ತನ್ನ ಪ್ರಸಿದ್ಧನಿಮಿತ್ತಂ ತನ್ನುಪಾದಾನದತ್ತಣಿಂ ಪರಾಕ್ಷೇಪಮಂ ಮಾಳ್ಪುದು **ಉಪಾದಾನ ಲಕ್ಷಣೆ** ಯೆನಿಕುಂ. ಅದೆಂತೆಂದೊಡೆ—"ಲಕ್ಷಸಬಳಂ ಬಂದುದು" ಎಂಬಲ್ಲಿ ಅಚೇತನಂಗಳಪ್ಪ ಸಬಳಂಗಳ್ಗೆ ಗಮನಮಿಲ್ಲಾದುದಱಿಂ ಮುಖ್ಯಾರ್ಥ ಬಾಧೆಯಾಗಿ ಸಬಳಮಂ ಪಿಡಿದ ವೀರಭಟರ್ ಬಂದರೆಂಬುದರ್ಥಂ —ಸಬಳಿಗ ನಾಧಾರಂ, ಸಬಳಮಾಧೇಯಂ, ಅದಱಿಂದಿಲ್ಲಿಯಾಧಾರಾಧೇಯಭಾವಸಂಬಂಧಮೆನಿಕ್ಕುಂ. ಶಸ್ತ್ರಬಾಹುಳ್ಯರಾದ್ರಾದಿಕಂಗಳ್ ಪ್ರಯೋಜನಂ ಉಪಾದಾನಲಕ್ಷಣೆ**ಗಜಹಲ್ಲಕ್ಷಣೆ** ಯೆಂದು ನಾಮಾಂತರಂ.

(೨) ಇನ್ನು **ಲಕ್ಷಣಲಕ್ಷಣೆ ಯೆಂತೆಂದೊಡೆ** :—ತನ್ನಸಂಬಂಧಿಯಾದರ್ಥಂ ನಿಮಿತ್ತಮಾಗೆ ತನ್ನರ್ಥಮಂ ಬಿಡಲ್ಪಟ್ಟುದಾವುದಾನೊಂದುಂಟು ಅದು **ಲಕ್ಷಣಲಕ್ಷಣೆಯೆನಿಕುಂ,** ಲಕ್ಷಣಮೆಂದು ತನ್ನರ್ಥಮಂ ಪರಾರ್ಥದೊಳಾರೋಪಣಂ ಮಾಳ್ಪುದಱಿಂ ಕಾಣಲ್ಪಟ್ಟ, ಲಕ್ಷಣೆ ಲಕ್ಷಣಲಕ್ಷಣೆ ಯೆನಿಕ್ಕುಂ, ಇದರ್ಕೆ **ಜಹಲ್ಲಕ್ಷಣೆ** ಯೆಂದುಂ, **ಸಾಂತರಾರ್ಥವಿಷಯ** ಲಕ್ಷಣೆ ಯೆಂದುಂ ಶಾಸ್ತ್ರಾಂತರದೊಳ್ ಪರ್ಯಾಯನಾಮಂ,—ಅದರ್ಕುದಾಹರಣೆ—"ಪೊೞಿಯೊಳ್ ಪೊೞಲ್" ಎಂಬಲ್ಲಿ ಜಲದೊಳ್ (ಪೊೞಲ್) ಪುರಮಸಂಭಾವ್ಯಮಾದುದಱಿಂ ಮುಖ್ಯಾರ್ಥಬಾಧೆ, ತತ್ಸಂಬದ್ಧಮಪ್ಪ ತಡಿಯೊಳ್ ಪೊೞಲ್ ಎಂಬುದರ್ಥಂ, ಶೈತ್ಯಪಾವನಾದಿಕಂಗಳ್ ಪ್ರಯೋಜನಂ.—

(೩) **ಗೌಣಸಾರೋಪಲಕ್ಷಣೆ** ಯೆಂದೊಡೆ—ಆರೋಪ್ಯಾರೋಪಕಂಗಳ್ ಅವುದಾನೊಂದೆಡೆಯೊಳ್ ಭಿನ್ನಮಾಗಿ ಪೇೞಲ್ಪಟ್ಟುವು ಸ್ವಭಾವದಿಂದಾಲಕ್ಷಣೆ **ಗೌಣಸಾರೋಪಲಕ್ಷಣೆ**ಯೆನಿಕುಂ.—ಅದರ್ಕುದಾಹರಣೆ—

"ಪಾರ್ವನೆಟ್ಟಿತ್ತಿಂ" ಬಲ್ಲಿ ಪಾರ್ವಂಗೆ ಪಾದಚತುಷ್ಟಯಂ ಶೃಂಗದ್ವಯಾದಿಗಳಸಂಗತಮಾದುದಱಿಂ ಮುಖ್ಯಾರ್ಥಬಾಧೆ, ಸ್ಥೂಲಸತ್ವಾದಿಕಂಗಳ್ ಲಕ್ಷ್ಯಂ, ಜಾಡ್ಯಮಾಂದ್ಯಾದಿಕಂಗಳ್ ಪ್ರಯೋಜನಂ.

(೪) **ಗೌಣಸಾಧ್ಯವಸಾನಕ್ಕೆ** ಉಪಮೇಯಂ ಪೋಗೆ ಉಪಮಾನಂ ಉೞಿದೊಡೆ **ಗೌಣಸಾಧ್ಯವಸಾನ** ಮೆನಿಕ್ಕುಂ. "ಅವಳ್ ತಾವರೆಗೊಳದೊಳಡಂಗಿದೊಡರಸಿದೆಂ" ಎಂಬಲ್ಲಿ ಮುಖ್ಯಾರ್ಥಬಾಧೆ, ತಾವರೆಯಂತಪ್ಪ ಮುಖಮನುಳ್ಳವಳೆಂಬುದು ಸಾದೃಶ್ಯಂ. ಪದ್ಮಿನಿಜಾತಿಸ್ತ್ರೀಯೆಂಬುದು ವ್ಯಙ್ಗ್ಯಂ.

(೫) **ಶುದ್ಧಸಾರೋಪಲಕ್ಷಣೆ** ಯೆಂತೆಂದೊಡೆ—ಸಾದೃಶ್ಯ ಸಂಬಂಧವಿಲ್ಲದೆ ಸಂಬಂಧಾರೋಪದಿಂ ತಾದಾತ್ಮ್ಯಮಾಗಿರ್ಪುದು **ಶುದ್ಧ ಸಾರೋಪಲಕ್ಷಣೆ** ಯೆನಿಕ್ಕುಂ. "ಆವನೊರ್ವನ ಖಡ್ಗಂ ದೇವಸ್ತ್ರೀಯರ್ಕಳ ಮದುವೆಯಲ್ಲಿ ಕೆಯ್ಗೂಡುವುದನಂ" ಪ್ರಯೋಜ್ಯಪ್ರಯೋಜಕಭಾವಮೆಂಬುದು ಸಂಬಂಧಂ. ಧರ್ಮವಿಜಯಮೆ ವ್ಯಙ್ಗ್ಯಂ.

(೬) **ಶುದ್ಧಸಾಧ್ಯವಸಾನಮೆಂ**ತೆಂದೊಡೆ—ಇದು ಕೆಯ್ಗೂಡಪುದು ಎಂಬಲ್ಲಿ ಎಲ್ಲಂ ಪೂರ್ವದಂತೆ ಭೇದಂ.—ವಿಶೇಷಂ ಗೂಢವ್ಯಙ್ಗ್ಯಗಳಾಱುವಱ ನೀತಿಯಿಂದಿನೂಹಿಸಿಕೊಳ್ವುದು.—

ಅರೆಬರ್ **ಜಹದಜಹಲ್ಲಕ್ಷಣೆ**ಯಂ ಪೇೞ್ವರದೆಂತೆಂದೊಡೆ— "ಗ್ರಾಮಂ ಬಂದುದು, ನಗರಂ ಬೆಂದುದು, ವನಂ ಪೂತುದು, ಇವು ಮೂಂತಾದುವಱೊಳ್ ಗ್ರಾಮನಗರವನಂಗಳ್ ಏಕದೇಶದಿಂ ಬಂದುದು, ಬೆಂದುದು, ಪೂತುದು. ಎಂಬಲ್ಲಿ ಯೆಲ್ಲಂ ಬಂದುದು, ಬೆಂದುದು, ಪೂತುದು, ಎಂಬರ್ಥಮಿಲ್ಲಾದುದಱಿಂ **ಜಹದಜಹಲ್ಲಕ್ಷಣೆ** ಯೆನಿಕುಂ [ಎಂದು ಪೇೞ್ವರ್]

ಇವುಮೊದಲಾದ ಲಕ್ಷಣೆಗಳೊಳ್ ಅವಿನಾಭಾವಸಂಬಂಧಂ ಪೊಱಗಾಗಿ ಉೞಿದಸಂಬಂಧಂಗಳಿವಱೊಳೊಳವು.— ಅವಿನಾಭಾವಸಂಬಂಧಮೆಂದೊಡೆ "ದೊಡ್ಡವನಪ್ಪ ದೇವದತ್ತಂ ಪಗಲಿನಲ್ಲಿ (ದಿವದಲ್ಲಿ) ಯೆಂದುಂ ಉಣ್ಣ" ನೆಂಬುದಱಿಂ "ರಾತ್ರಿಭೋಜನಮುಂಟೆಂ" ಬುದಱಿಯೆ ಬರು

ತ್ತ್ರಿರ್ದಶತ್ತದುಕಾರಣಂ ಇವು ಮೊದಲಾದುವು ಲಕ್ಷಣೆಯಾಗುಗೆ ಎಂದೊಡೆ ಅವಿನಾಭಾವಮುಂಟಪ್ಪುದಱಿಂ ಲಕ್ಷಣೆಯಲ್ತು.

ತಾದಾತ್ಮ್ಯದೊಳ್ ಇಂದ್ರಸಿಪುತ್ತಮಾದಮರಗಿಂದ್ರನೆಂಬುದು. ಸ್ವಸ್ವಾಮಿಸಂಬಂಧದೊಳ್ ಅರಸಾಳನರಸೆಂಬುದು. ಅವಯವಾವಯವಿಸಂಬಂಧದೊಳ್ ತುದಿವೆರಲಂ ಪಿಡಿದು ಕೆಯ್ಯಂ ಪಿಡಿದನೆಂಬುದು. ತತ್ಕರ್ತೃಸಂಬಂಧದೊಳ್ ಚಿತ್ರಿಗನಲ್ಲದನಂ ಚಿತ್ರಮಂ ಬರೆವುದಱಿಂ ಚಿತ್ತರಿಗನೆಂಬುದು. ಇವು ಮೊದಲಾದುವಂ ನೋಡಿಕೊಳ್ವುದು.

ಅವಿನಾಭಾವಸಂಬಂಧಮಂ ಪರಿಹರಿಸಿದ ಕಥನಮೆಂತೆಂದೊಡೆ— "ಗೌರನುಬಂಧ್ಯಃ" (ಪಶುವು ಕೊಲ್ಲಲ್ಪಡತಕ್ಕುದು) ಎಂಬ ಶ್ರುತಿವಾಕ್ಯದಿಂ ಗೋಜಾತಿಯೊಳ್ ವಧಬಂಧಾದಿಕಂಗಳ್ ಅಶಕ್ಯಮಾದುದಱಿಂ ಜಾತಿಯೊಡನವಿನಾಭಾವಮಾದ ವ್ಯಕ್ತಿಗಾಕ್ಷೇಪಂ. ಅದಱಿಂ ವ್ಯಙ್ಗ್ಯಶ್ವಿಲ್ಲಾಗಿ ಲಕ್ಷಣೆಯಲ್ತು—

**ಶಬ್ದಮೂಲ ವ್ಯಂಜಕ** ಮೆಂತೆಂದೊಡೆ

ಅನೇಕಾರ್ಥಮನುಳ್ಳ ಶಬ್ದಕ್ಕೆ ಸಂಯೋಗಾದಿಕಂಗಳಿಂದೇಕಾರ್ಥದೊಳ್ ನಿಯಮಮುಂಟಾಗಿ ಅರ್ಥಾಂತರಮಂ ತೋರ್ಪುದು ಶಬ್ದಮೂಲವ್ಯಂಜಕಮೆನಿಕುಂ —

**ಸಂಯೋಗಾದಿಕಂಗ**ಳೆಂತೆಂದೊಡೆ.

**ಸಂಯೋಗ**ಮೆಂದುಂ, **ವಿಪ್ರಯೋಗ**ಮೆಂದುಂ, **ಸಾಹಚರ್ಯ**ಮೆಂದುಂ **ವಿರೋಧ**ಮೆಂದುಂ **ಅರ್ಥ**ಮೆಂದುಂ, **ಪ್ರಕರಣ**ಮೆಂದುಂ, **ಲಿಂಗ**ಮೆಂದುಂ, **ಅನ್ಯಶಬ್ದಸನ್ನಿಧಿ**ಯೆಂದುಂ, **ಸಾಮರ್ಥ್ಯ**ಮೆಂದುಂ, **ಔಚಿತ್ಯ**ಮೆಂದುಂ, **ದೇಶ**ಮೆಂದುಂ, **ಕಾಲ**ಮೆಂದುಂ, **ವ್ಯಕ್ತಿ**ಯೆಂದುಂ, **ಸ್ವರ**ಮೆಂದುಂ, ಇವು ಮೊದಲಾದುವು ಶಬ್ದಾರ್ಥಂಗಳ್ಗೆ ಸಂದೇಹಮಾದೊಡೆ ನಿಶ್ಚಯಮಂ ಮಾಳ್ಪುವು. ಅವರ್ಕೆ ಕ್ರಮದಿಂದುದಾಹರಣೆಗಳೆಂತೆಂದೊಡೆ."(1)ಶಂಖ ಚಕ್ರಾಂಕಿತಂ ಹರಿ ಬಂದ"ನೆಂಬಲ್ಲಿ ಹರಿಶಬ್ದಕ್ಕೆ ಸಿಂಹಾದ್ಯನೇಕಾರ್ಥಂಗಳುಂಟಾದೊಡಂ ಶಂಖಚಕ್ರಶಬ್ದಸಂಯೋಗದಿಂ ಕೃಷ್ಣನೆಂಬರ್ಥಮಾದುದು.... "ಸೀತೆಯಿಂದಗಲ್ದಂ ರಾಮ"ನೆಂಬಲ್ಲಿ ರಾಮಶಬ್ದಕ್ಕೆ ಅನೇಕಾರ್ಥಮುಂಟಾದೊಡಂ ಸೀತಾವಿಯೋಗದಿಂದೆ ದಶರಥರಾಮನೆಂಬುದರ್ಥಂ—"ರಾಮಲಕ್ಷ್ಮಣರ್ ಸಂಗ್ರಾಮದೊಳ್ ಕೋದಂಡಮಂ ಪಿಡಿದ"

(1) ಈ ಉದಾಹರಣೆಗಳ ವಿಷಯದಲ್ಲಿ ಕವಿಯು ಕಾವ್ಯಾನುಶಾಸನವನ್ನು ಅನುಸರಿಸಿಲ್ಲ.

ರೆಂಬಲ್ಲಿ ಲಕ್ಷ್ಮಣಸಾಹಚರ್ಯದಿಂ ರಾಘವನೆಂಬುದರ್ಥಂ,—"ಕರ್ಣಾರ್ಜುನರ್ ಕಾದಿದ"ರೆಂಬಲ್ಲಿ ಅರ್ಜುನಶಬ್ದಕ್ಕೆ ನಾನಾರ್ಥಮುಳ್ಳೊಡಂ ವಿರೋಧದಿಂ ಪಾರ್ಥನೆಂಬುದರ್ಥಂ.—"ಮಕರಧ್ವಜಂ ದೇವಂ" ಎಂಬಲ್ಲಿ ದೇವಶಬ್ದಕ್ಕೀಶ್ವರವಿರೋಧವಾಚಕತ್ವಮುಳ್ಳೊಡಂ ಅರ್ಥದಿಂ ಕಾಮನೆಂಬುದು. "ದೇವರಱಿಯದ ವಿಷಯಮಿಲ್ಲ" ಎಂಬಲ್ಲಿ ಪ್ರಕರಣದಿಂ ದೇವಶಬ್ದಕ್ಕೆ ನೀನೆಂಬುದರ್ಥಂ, "ಮಕರಧ್ವಜಂ ಕೋಪಿಸಿದನೆಂಬಲ್ಲಿ ಮಕರಧ್ವಜಶಬ್ದಕ್ಕೆ ಸಮುದ್ರಾರ್ಥಮುಳ್ಳೊಡಂ ಕೋಪಚಿಹ್ನದಿಂ ಮದನನೆಂಬುದರ್ಥಂ. "ತ್ರಿಪುರಾರಿ ದೇವ"ನೆಂಬಲ್ಲಿ ದೇವಶಬ್ದಕ್ಕೆ ಪಲವರ್ಥಮುಳ್ಳೊಡಂ ತ್ರಿಪುರಶಬ್ದ ಸಾನ್ನಿಧ್ಯದಿಂ ಭವಾನೀಪತಿಯೆಂಬುದರ್ಥಂ—"ಮಧುವಿಂ ಸೊರ್ಕಿತು ಕೋಕಿಳ"ಮೆಂಬಲ್ಲಿ ಮಧುಶಬ್ದಕ್ಕೆ ಪುಷ್ಪರಸಂ ಮೊದಲಾದ [ನೇಕಾರ್ಥಮಿರ್ದೊಡಂ] ಸಾಮರ್ಥ್ಯದಿಂ ವಸಂತಕಾಲಮೆಂಬುದರ್ಥಂ. ಭೋಜನದೊಳ್ "ಸೈಂಧವಮಂ ಕೊಂಡು ಬಾ" ರೆಂಬಲ್ಲಿ ಸೈಂಧವಶಬ್ದಕ್ಕನೇಕಾರ್ಥಮುಳ್ಳೊಡಮೌಚಿತ್ಯದಿಂ ಲವಣಮೆಂದಱಿದು ಕೊಳ್ವುದು,—"ಪಟ್ಟಣಮಂ ಪರಮೇಶ್ವರಂ ಪಾಲಿಸಿದ" ನೆಂಬಲ್ಲಿ ದೇಶದಿಂ ಪರಮೇಶ್ವರಶಬ್ದಕ್ಕೆ ರಾಜನೆಂಬುದರ್ಥಂ,—"ಚಿತ್ರಭಾನು ಶೋಭಿತ"ಮೆಂಬಲ್ಲಿ ದಿವಮಾದೊಡೆ ಸೂರ್ಯನೆಂದಱಿವುದು, ರಾತ್ರಿಯಾದೊಡೆ ಬೆಂಕಿಯೆಂದಱಿವುದು. "ನಾರಿಗಳಂ ಕಡಿದ" ನೆಂಬಲ್ಲಿ ನಪುಂಸಕವ್ಯಕ್ತಿಯಿಂ ಬಿಲ್ಲ ಹೆದೆಗಳಂ ಕಡಿದನೆಂಬುದರ್ಥಂ. "ನಾರಿಯರಂ ಕಡಿದ"ನೆಂಬಲ್ಲಿ ಸ್ತ್ರೀಲಿಂಗವ್ಯಕ್ತಿಯಿಂ ಸ್ತ್ರೀಯರಂ ಕಡಿದನೆಂಬುದರ್ಥಂ, **ಸ್ವರಂಗಳ್** ವೇದದಲ್ಲಿ ಪ್ರಸಿದ್ಧಂಗಳ್, ಕಾವ್ಯಮಾರ್ಗದೊಳ್ ಅಪ್ರಸಿದ್ಧಂ. ಇದು ಶಬ್ದದಿಂದ ಭಿನ್ನ ನಿಯಾಮಕಂಗಳ್.

ಅಭಿನಯಕ್ಕುದಾಹರಣೆ :—

ಕಂ|| ಇಂತಪ್ಪ ಕಣ್ಗಳಾಕೆಯ।
ನಿಂತಪ್ಪಾ ಕುಚಯುಗಂಗಳಾಬಾಲಿಕೆಯಂ ||
ಇಂತಪ್ಪ ನಡುವಿನಾಕೆಯ ।
ನಂತಿರ್ದಂತಗಲೆ ಹಂಪನಂತಿಂತಾದಂ || ೭||

ವ|| ಈರೀತಿಯಿಂದನೇಕಾರ್ಥಮುಳ್ಳ ಶಬ್ದಕ್ಕೆ (ಅರ್ಥ) ನಿಯಂತ್ರಣಮಾಗೆ ಅರ್ಥಾಂತರಪ್ರತೀತಿಗೆ ಕಾರಣಮಪ್ಪುದು I **ಶಬ್ದಮೂಲವ್ಯಂಜನೆ**ಯೆನಿಕುಂ.

**ಅದಕ್ಕುದಾಹರಣೆ.**

ಶಬ್ದಮೂಲವ್ಯಙ್ಗ್ಯಂ :—

ಚಂ|| ವಿದಳಿತಮಾದ ಕಂಟಕ [ಕದಂಬ]ದಿ ನುರ್ವಿದ ವಾಹಿನೀಸಮೂ |
ಹದಿನುರೆ ವೃದ್ಧಿವೆತ್ತು ಭುವನಾಶ್ರಯದಿಂ ಬಗೆಗೊಳ್ವ ಕುಂದದ ||
ಭ್ಯುದಯ *[ದ ಲೀಲೆವೆತ್ತುದುಱಿ]ಪೋದ ಮದೋದ್ಧತರಾಜಹಂಸತೇ |
ಜದಿನೆಸೆದತ್ತು ರಾಜ್ಯವಿಭವಂ ಜಲದಾಗಮಚಕ್ರವರ್ತಿಯಾ || ೮||

ಅರ್ಥ ವಿವರಣಂ—, ವಿದಳಿತಮಾದ— ಕೆಡವಲ್ಪಟ್ಟ, ಕಂಟಕದಿಂ- ಕಂಟಕತರುಗಳ ಸಮೂಹದಿಂ, ಉರ್ವಿದ—ಉಬ್ಬಿದಂಥ, ವಾಹಿನೀಸಮೂಹದಿಂ—ಸೇನಾಸಮೂಹದಿಂ, ಉರೆ ವೃದ್ಧಿವೆತ್ತು—ಪೆರ್ಚುಗೆವಡೆದು; ಭುವನಾಶ್ರಯದಿಂ—ಲೋಕಕಾಶ್ರಯವಾಗಿ, ಬಗೆಗೊಳ್ವ, ಕುಂದದೈಶ್ವರ್ಯದ ಲೀಲೆವೆತ್ತು, ಮಸುಳಿಸಿಹೋದಂಥ ರಾಜಶ್ರೇಷ್ಠರುಗಳ ತೇಜದಿಂ ಜಲದಾಗಮಚಕ್ರವರ್ತಿಯೆಂಬ ಪೆಸರುಳ್ಳಾತನ ರಾಜ್ಯವಿಭವವೊಪ್ಪಿತು—ಎಂಬುದು ವಾಚ್ಯಾರ್ಥಂ.—

ಇಲ್ಲಿ ಪ್ರಕರಣಾದಿಬಲದಿಂ ಶಬ್ದಗಳ್ಗೀಯರ್ಥದಲ್ಲಿ ನಿಯಂತ್ರಣಮಾಗೆ ಆವುದಾನೊಂದಱಿಂ, ವಿದಳಿತಮಾದ ಕಂಟಕದಿಂ—ಕೆಡವಲ್ಪಟ್ಟ ಮುಳ್ಳನುಳ್ಳಕಡವದ ಮರದಿಂ, ಉಬ್ಬಿದ ನದಿಗಳ ಸಮೂಹದಿಂ, ಪೆರ್ಚುಗೆವಡೆದು ಕೆಡಿಸಲ್ಪಟ್ಟ (1) ಚಂದ್ರಸೂರ್ಯರ ತೇಜಮನುಳ್ಳ ಮೞೆಗಾಲಮೆಂಬ ಚಕ್ರವರ್ತಿಯ ರಾಜ್ಯವಿಭವವೊಪ್ಪಿತ್ತು ಎಂಬರ್ಥ (ಎರಡರ್ಥ) ಮಂ ಕೊಂಡುಬರ್ಪುದು **ಶಬ್ದಮೂಲವ್ಯಙ್ಗ್ಯ** ಮೆಂದಱಿವುದು—.

II **ಅರ್ಥಶಕ್ತಿಮೂಲವ್ಯಂಜನೆಯುಂ** ಪೇೞ್ವಿನದೆಂತೆಂದೊಡೆ.

ಶಬ್ದಮಂ ಸಹಕಾರಿಯಂ ಮಾಡಿಕೊಂಡು ಅರ್ಥದಿಂದೆ ಅರ್ಥಾಂತರಂ ಪುಟ್ಟುವುದು **ಅರ್ಥಮೂಲವ್ಯಂಜನೆ**ಯೆನಿಕ್ಕುಂ, ಆಯರ್ಥಂ **ವಾಚ್ಯಮೂಲಂ, ಲಕ್ಷ್ಯಮೂಲಂ, ವ್ಯಙ್ಗ್ಯಮೂಲ** ಮೆಂದು ಮೂಱುಂ, (೧) ವಾಚ್ಯದತ್ತಣಿಂದರ್ಥಾಂತರಂ ಪುಟ್ಟುವುದು **ವಾಚ್ಯಮೂಲ**ಮೆನಿಕ್ಕುಂ.

(*) [ಪಾಠಾಂತರಂ. ದಿನೇೞ್ಗೆಗಟ್ಟೊದಱಿ] (ಜಗನ್ನಾಥವಿಜಯ).

(1) ರಾಜಹಂಸಶಬ್ದಕ್ಕೆ ಶ್ರೇಷ್ಠವಾದ ಹಂಸೆಗಳು ಎಂದು ಅರ್ಥಹೇಳಿ ಮೞೆಗಾಲವು ರಾಜಹಂಸಗಳನ್ನು ಅಡಱಿಸಿತ್ತು ಎಂದು ಅರ್ಥ ಹೇಳುವುದೂ ಯುಕ್ತವಾಗುವುದು.—

**ಅದಕ್ಕುದಾಹರಣೆ.**

ಉ|| **ಇಂದೆ ವಲಂ ಗೃಹೋಪಕರಣಂ ಮನೆಗಿಲ್ಲೆನುತೆಯ್ದೆ ಮತ್ತೆ ನೀ ।**
**ನೊಂದಿದ ಚಿತ್ತವಿಹ್ವಳತೆಯಿಂದಿರೆ ಕಾರಣಮೇವುದಬ್ಬೆ ನಾಂ ||**
**ತಂದಪೆ ನಿಂತು ಕಾಲವಿರದೇವೆಸನೇವುದು ಕಜ್ಜಮೆಂದ ಮಾ ।**
**ತಂ ದಯೆಯಿಂ ನಿರೂಪಿಪುದು ಪೋಪೆನೆ ಕಾಡದೆ ಪೇಳ್ ನಿರಾಕುಳಂ || ೯||**

ವ|| (ವಿವರಣಂ) ಇಲ್ಲಿ ಸರಸನಪ್ಪ ವಿಟವಿಶೇಷನಂ ಬಯಸಿ **ಪೋಪುದರ್ಕೆ** ತಾಯೊಡನಾಡುವ ಗಣಿಕೆಯ ಮಾತು. ಇಂತು **ಕಾಲವಿರಬಾರದೆಂಬುದಱಿಂ** ಸ್ವೇಚ್ಛಾವಿಹಾರಿಣಿ ಯೆಂಬುದರ್ಥಂ ವ್ಯಙ್ಗ್ಯಂ.—

(೨) ಲಕ್ಷಣಾಮೂಲಗೂಢವ್ಯಙ್ಗ್ಯಂ ಪ್ರಾಧಾನ್ಯಮಾಗೆ ವಾಚ್ಯಾರ್ಥಾವಿವಕ್ಷಿತಮಾಗಿ ಯೆಲ್ಲಿ ತೋರ್ಕುಮದು **ಲಕ್ಷಣಾಮೂಲಧ್ವನಿ** ಯೆನಿಕ್ಕುಂ, ಅದು (a) **ಅರ್ಥಾಂತರಸಂಕ್ರಮಿತ** ವಾಚ್ಯ(b)**ಮತ್ಯಂತತಿರಸ್ಕೃತ** ವಾಚ್ಯ ಮೆಂದಿರ್ತೆಱಂ.

ವಾಚ್ಯಾರ್ಥಂ ಪ್ರಯೋಜನವಿಲ್ಲದುದಱಿಂ**ದರ್ಥಾಂತರಪರಿಣಮಿತಂ**(a) [ಅರ್ಥಾಂತರ ಸಂಕ್ರಮಿತವಾಚ್ಯಮಪ್ಪುದು] ಎಂತೆಂದೊಡೆ.—

ಲಕ್ಷ್ಯಂ.

ಕಂ|| ಆನಾಗಿರ್ದಪೆ ನೊಲಪಿಂ ।
ಸೇನಱಿಯಲ್ ಪೇೞ್ದಪೆಂ ಬುಧರ್ಕಳ ನಡುವೆ ||
ರ್ದೆ ನಿನ್ನ ಬುದ್ಧಿಲಾಸಮ ।
ದೇನಲ್ಲದೆ ನಿಲ್ವುದಿಲ್ಲಿ ನೆಲೆಗೊಂಡನಿಶಂ || ೧೦||

ವಿ|| ಇಲ್ಲಿ ಪೇೞ್ದಪೆನೆಂಬುದು ಮಂತ್ರಾದ್ಯುಪದೇಶಮಾಗಿ **ಪರಿಣತಮಾದುದು** ಮದಱಿಂ ನಿಷ್ಪ್ರಯಾಸದಿಂ ಶಿಕ್ಷಿಪೆನೆಂಬುದು ವ್ಯಙ್ಗ್ಯಂ—

ವ|| ಬಂಹಾನೊಂದು ಠಾವಿನಲ್ಲಿ ವಾಚ್ಯಾರ್ಥಂ ಯುಕ್ತಿಶೂನ್ಯಮಾದುದಱಿಂ(b)ದ**ತ್ಯಂತತಿರಸ್ಕೃತಂ,** ಎಂತೆಂದೊಡೆ.—

ಲಕ್ಷ್ಯಂ.

ಚಂ|| ಅರಸೆಲೆ ನೀವೆ ಮಾಡಿದುಪಕಾರವನಾಡುವೊಡೆನ್ನ ಶಕ್ಯವ |
ಲ್ತುರುಸುಜನತ್ವಕಿಂತೆಸೆವ ನಿಮ್ಮನೆ ಪೇೞ್ದು ಬೞಿಕ್ಕೆ ಮಿಕ್ಕರಂ ||
ಸ್ಮರಿಯಿಸತಕ್ಕುದಲ್ತು ಬಿಡದೀತೆಱದಿಂದೆ ಪೆಱರ್ಗೆ ಲೇಸನಾ |
ದರದೊಳೆ ಮಾೞ್ಪ ನೀವವನಿಯೊಳ್ ಸ್ಥಿರಜೀವಿಗಳಾಗಿ ವರ್ತಿಸಿಂ|| ೧೧||

ವಿ|| ಇಲ್ಲಿ ಉಪಕಾರಮಿಲ್ಲದವನಂ ಕುಱಿತು ವಿಪರೀತಲಕ್ಷಣೆಯಿನೊಬ್ಬಾನೊಬ್ಬನಂ ಪೇೞುತಿರ್ದನೆಂಬುದು ವ್ಯಙ್ಗ್ಯಂ.

(೩) ವ್ಯಙ್ಗ್ಯಾರ್ಥದತ್ತಣಿಂ ವ್ಯಙ್ಗ್ಯಾಂತರಂ ಪುಟ್ಟುವುದು **ವ್ಯಙ್ಗ್ಯಮೂಲವ್ಯಂಜನೆ** ಯೆನಿಕ್ಕುಂ.

ಅದಕ್ಕುದಾಹರಣೆ.

ಚಂ|| ಎಲೆ ಎಲೆ ನೋಡ ತಾವರೆಯ ಪತ್ರದೊಳೊಂದು ಬಳಾಕಪಕ್ಷಿ ನಿ |
ಶ್ಚಲಿತನಿಜಾಂಗನಾಗಿ ಪೊಸಪಚ್ಚೆಯ ಭಾಜನದಲ್ಲಿ ಶಂಖಮು ||
ಜ್ಜ್ವಲಿಸುವ ಮಾೞ್ಕೆಯಿಂ ತೊಳಗುವಂದಮಿದಾದಮನೋಜ್ಞಮಾಯ್ತು ನಿ|
ರ್ಮಲತರಶೈತ್ಯಸಾರಜಲಪೂರಿತಮಪ್ಪ ಸರೋಜಷಂಡದೊಳ್ || ೧೨||

ವಿವರಣಂ. ಇಲ್ಲಿ ನಿಶ್ಚಲಿತನಿಜಾಂಗನೆಂಬುದಱಿಂ ನಿಶ್ಚಲಿತಾತ್ಮಮೆ ಮುಖ್ಯಾರ್ಥಮಾಗಿ ತೋರೆಯದಱಿಂ ಜನವಿರಹಿತಮೆಂಬುದು ವ್ಯಙ್ಗ್ಯಂ. ಅದಱತ್ತಣಿಂದೀಪ್ರದೇಶಮೆ ಸಂತೇತಕ್ಕೆ ಯೋಗ್ಯಮೆಂಬುದು ವ್ಯಙ್ಗ್ಯಂ, ಅದಱಿಂ ಗಾಢಸಂಭೋಗಮಪ್ಪುದೆಂಬುದು ವ್ಯಙ್ಗ್ಯಂ, ಅದಱಿಂ ನಾಯಕನುಷ್ಣಶರೀರಿಯೆಂಬುದು ವ್ಯಙ್ಗ್ಯಂ,

ಇವಂ ಸಾಮಾನ್ಯದಿಂ ಪೇೞ್ದಿಂ, ಇನ್ನಿತ್ತಲ್ ವಿಶೇಷಮಂ ಪೇೞ್ವೆನದೆಂತೆಂದೊಡೆ— ಮುಖ್ಯಲಕ್ಷ್ಯಾರ್ಥದತ್ತಣಿಂದೆ ಭಿನ್ನಮಾಗಿ ಪ್ರತೀತಿವಿಷಯಮಾದ ವ್ಯಙ್ಗ್ಯಮಪ್ಪರ್ಥಮೆ ಧ್ವನಿಯೆಂದು ಪೇೞ್ಪಟ್ಟುದು. ಅದು ವಸ್ತ್ವಲಂಕಾರರಸಾದಿಭೇದದಿಂ ಮೂದೆಱಂ—ಮುಖ್ಯಲಕ್ಷ್ಯಂಗಳಿಂದತ್ಯಂತ ಭಿನ್ನಮಾದ ಧ್ವನಿ, ವಾಚ್ಯಂ ವಿಧಿರೂಪಮಾಗೆ ಪ್ರತಿಷೇಧರೂಪಂ—ಅದೆಂತೆಂದೊಡೆ—

ಚಂ|| ಬೆಗಡಿಸುತಿರ್ದುದಿನ್ನಿವರವಿೂತಟನೀನಿಕಟಪ್ರದೇಶದೊಳ್ ।
ಸೊಗಯಿಸುತಿರ್ಪ ಸಾಲ್ವೊದಱ ತಣ್ಣೆಱಲೊಳ್ ನೆಲಸಿರ್ದ ನಾಯದಂ ||
ದುಗಿಬಗಿಯಾದುದಿಂದು ನಖರಾಯುಧಭೀಕರಸಿಂಹದಿಂದೆ ನೀಂ ।
ವಿಗತವಿಶಂಕೆಯಿಂ ಸುೞಿಯಲಾದುದು ತತ್ಪಥದೊಳ್ ಸುಮಪ್ರಿಯಾ ||

ವಿ|| ಇಲ್ಲಿ ಸಿಂಗದಿಂ ನಾಯ್ ಕೊಲಲ್ಪಟ್ಟಿತು [ನೀಂ] ನಿಶ್ಶಂಕೆಯಿಂದೆಡೆಯಾಡೆಂಬ ವಿಧಿರೂಪವಾಚ್ಯದಿಂ ಸಂಕೇತಸ್ಥಾನಮಪ್ಪ ನದೀತಟನಿಕುಂಜದೊಳ್ ಸಿಂಹವಿರ್ದುದು ಅಲ್ಲಿ ನೀನೆಡೆಯಾಡಲಾಗದೆಂಬೀ ನಿಷೇಧರೂಪಮಪ್ಪ ವ್ಯಙ್ಗ್ಯಾರ್ಥಂ ಪ್ರಾಧಾನ್ಯದ್ಯೋತಕಮಪ್ಪುದು—

ನಿಷೇಧದೊಳ್ ವಿಧಿಯೆಂತೆಂದೊಡೆ.

ಚಂ|| ಒಱಗುವಳತ್ತೆ ಮೆಲ್ಲರಳೆವಾಸಿನೊಳೀಯೆಡೆಯಲ್ಲಿ ನೋಂಕದಂ ।
ತೊಱಗುವೆನೊತ್ತಿನೊಳ್ ಪಱಿದ ಪಾಸಿನೊಳಾನಿರುಳಂಧನಪ್ಪ ನೀಂ ||
ಮಱೆಯದೆ ಕಾಣಿವಂ ಮಸು[ಕು]ಗಲ್ತಲೆ ಬೀೞದ ಮುನ್ನ ತಳ್ಕಿಗೊಂ ।
ಡೆಱಗದಿರೊಂದಿದೆಮ್ಮೆರಡು ಪಟ್ಕಿಗಳಿರ್ಪೆಡೆಯೊಳ್ ಪ್ರವಾಸಿಗಾ || ೧೪||

ವಿ|| ಇಲ್ಲಿ ತನ್ನ ಪಾಸುಗೆಯಲ್ಲಿ ಮಲಗದಿರೆಂಬ ನಿಷೇಧರೂಪದಿಂದಿಲ್ಲಿಗೆ ಬಾರೆಂಬ ವಿಧಿಃಧ್ವನಿಸಲ್ಪಟ್ಟಿತು—

ವಿಧಿಯೊಳ್ ವಿಧಿಯೆಂತಂದೊಡೆ.

ಕಂ|| ಎಲೆ ನೆರೆಯಾತನೆ ಯೀಗಳ್ ।
ನಲವಿಂ ಪತಿ ಪೋದನೂರ್ಗೆ ಮತ್ತೊರ್ವನುಮಿ ||
ಲ್ಲಲಘುತರಮಾಯ್ತು ಕಡುಗ ।
ೞ್ತಲೆ ನೀಂ ಪರಿಹರಿಪುದೆನಗೆ ಚೋರರ ಭಯಮಂ || ೧೫||

ವಿ|| ಇಲ್ಲಿಯೆನಗೆ ಚೋರರ ಭಯಮಂ ಪರಿಹರಿಪುದೆಂಬೀವಿಧಿಯಿಂದೆ, ಗಾಢಾಂಧಕಾರಮಪ್ಪ ರಾತ್ರಿಯಂ, ಪತಿ ದೇಶಾಂತರಕ್ಕೆ ಪೋದುದಂ, ಗೃಹದೊಳಾರುಮಿಲ್ಲದುದಂ ಅಱಿತ ನೀಂ ನಿರ್ಭೀತನಾಗಿ ತನ್ನ ಸವಿೂಪಕ್ಕೆ ಬಾರೆಂಬ ವಿಧ್ಯಂತರಂ ತೋಱಿಸಲ್ಪಟ್ಟಿತು—

ನಿಷೇಧದೊಳ್ ನಿಷೇಧಮೆಂತೆಂದೊಡೆ.

ಕಂ|| ಎಲೆ ವೃಷಭ ಗೇಹಪತಿ ಮನ ।
ವಲಸದೆ ಬೞಿಗಂತು ಗಟ್ಟಿ ಯಾತ್ಮಕ್ಷೇತ್ರ ||
ಸ್ಥಲಮಂ ರಕ್ಷಿಸುತಿರ್ದಪ ।
ನುಲಿಸಿಲ್ಲದೆ ತೊಲಗು ಪೋಗು ಕಾಣದ ಮುನ್ನಂ || ೧೬||

ವಿ|| ಇಲ್ಲಿ ಗೃಹಪತಿ ಕ್ಷೇತ್ರದೊಳ್ ದುಷ್ಟವೃಷಭನಿವಾರಣತತ್ಪರನಾಗಿರ್ದಪನೆಂಬ ನಿಷೇಧವಾಕ್ಯದೊಳ್ ಉಪಪತಿನಿವಾರಣಂ ನಿಷೇಧಾಂತರಂ ತೋಱಿಸಲ್ಪಟ್ಟಿತು.

ವಿಧಿನಿಷೇಧವಿಲ್ಲದಲ್ಲಿ ವಿಧಿಯೆಂತೆಂದೊಡೆ.

ಚಂ|| ಎಲೆ ಗಡ ಪಾಂಥ ನಿರ್ಭರದಿನೆಯ್ತರುತಿರ್ದಪೆಯುಟ್ಟ ಸೀರೆಯಂ ।
ಸುಲಿವೊಡೆ ಬರ್ಪೆಯಕ್ಕ್ಕುಮಿದನಾರ್ಗುಸಿರ್ವೆಂ ನೆಱೆಬಾರುವಿಲ್ಲ ಕ ||
ಟ್ಟಲೆ ತಲೆದೋಱುತಿರ್ದಪುದು ಭಾವಿಸೆ ಬಾಲಿಕೆಯೊರ್ವಳಾನೆ ನೀಂ ।
ಬಲಯುತನೆಂತು ಗೆಯ್ದಪೆಯೊ ದೂರಮದಿಲ್ಲಿಗೆ ಮನ್ನಿಜಾಲಯಂ || ೧೭||

ವಿ|| ಇಲ್ಲಿ ವಿಧಿನಿಷೇಧಂಗಳಂ ಪೇೞದಿರ್ದೊಡಂ ಆನೊರ್ವಳ್, ಗ್ರಾಮಂ ದೂರಮೆಂಬಿವು ಮೊದಲಾದೇಕಾಂತೋಪದೇಶದಿಂ ತನ್ನ ನಿತಂಬದ ವಸ್ತ್ರಮಂ ತೆಗೆ ಯೆಂಬ ವಿಧಿ ಧ್ವನಿಸಲ್ಪಟ್ಟಿತು—

ವಿಧಿನಿಷೇಧಂಗಳಲ್ಲದವಱೊಳ್ ನಿಷೇಧಮೆಂತೆಂದೊಡೆ.

ಕಂ|| ಎನಗಿನಿಯನೆ ಬಾೞ್ವಾಸೆಯ ।
ಘನವರ್ಧದ ಮೇಲಣಾಸೆ ಯಿಲ್ಲಿರ್ಪ್ಪೊಡೆ ನೀಂ ||
ಮನವತ್ತಿರು ಪೋಪೊಡೆ ಪೋ ।
ಗಿನಿತುೞಿಯದೆ ಯೆನ್ನವಸ್ಥೆಯಂ ನಿನಗುಸಿರ್ದೆಂ || ೧೮||

ವಿ|| ಇಲ್ಲಿ ಪೋಪೊಡೆ ಪೋಗು, ಇರ್ಪೊಡೆ ಇರು ಎಂಬ ವಿಧಿನಿಷೇಧಂಗಳಿಲ್ಲದಲ್ಲಿ, ನನಗೆ ಬರ್ದುಂಕುವಾಸೆ ಬಹುಳಂ, ಧನದಾಸೆಯಿಲ್ಲಮೆಂಬ ವಚನದಿಂ ನೀನಿಲ್ಲದೊಡಾಂ ಬರ್ದುಂಕುವುದರ್ಕೆ ಸಮರ್ಥೆಯಲ್ಲೆಂಬಾಕ್ಷೇಪದಿಂ ಗಮನನಿಷೇಧಂ ತೋಱಿಸಲ್ಪಟ್ಟಿತು—

ವಿಧಿನಿಷೇಧಂಗಳಲ್ಲಿ ವಿಧ್ಯಂತರವೆಂತೆಂದೊಡೆ.

ಚಂ|| ಎಲೆಎಲೆ ಪಾಂಥ ಪೋದಪೆಯದೆಲ್ಲಿಗೆ ಮದ್ವಧುವಿರ್ಪ ತಾಣಕೀ |
ಪೊಲದೊಳೆ ಪೋಗದನ್ಯಪಥದೊಳ್ ಗಮಿಸಿಲ್ಲಿಯೆ ಪೋಪೆಯಪ್ಪೊಡೀ ||
ನೆಲೆಯ ತಳಾರನಾತ್ಮಭವೆ ಪೂರ್ಣಸುಧಾಕರಬಿಂಬವಕ್ತ್ರೆ ನಿ |
ರ್ಮಲತರಗಾತ್ರೆ ಚಾರುಸರಸೀಜದಳಾಯತನೇತ್ರೆ ಯಿರ್ದಪಳ್ || ೧೯||

ವಿ|| ಇಲ್ಲಿ ಈಮಾರ್ಗದಲ್ಲಿ ಪೋಗಬೇಡ ಮತ್ತೊಂದು ಮಾರ್ಗದಲ್ಲಿ ಪೋಗು ಎಂದು ವಿಧಿನಿಷೇಧಂಗಳಂ ಪೇಳ್ವುದರಿಂ ಎಲೆಪೊಬಗನಪ್ಪಾತನೆ ಸ್ತ್ರೀಯ ರೂಪಂ ನೆನೆದು ಕಾಣ್ಬಲ್ಲಿ ತತ್ಪರನಾದಾತನೆ ಈಗ್ರಾಮದ ತಳಾರನ ಮಗಳುಂ ನೀನವಶ್ಯಂ ಕಾಣ್ಬುದರ್ಕೆ ಯೋಗ್ಯನೆಂಬ ವಿಧ್ಯಂತರಂ ತೋರಿಸಲ್ಪಟ್ಟಿತು—

ವಿಧಿನಿಷೇಧಂಗಳಲ್ಲಿ ನಿಷೇಧಾಂತರಮೆಂತೆಂದೊಡೆ.

ಕಂ|| ಎಲೆ ಪೊಕ್ಕಲಿಗನ ಸೊಸೆ ಕೇಳ್ |
ನಲವಿಂ ಬಿದ್ದಲರನಾಯ್ದುಕೊಳ್ ಗಿಡುವಂ ಸ |
ಯ್ತಲುಗದೆ ಕರವಲಯದ ಬ |
ಲ್ಲುಲಿಪಿಂದವಸಾನವಿರಸಮಕ್ಕುಮಮೋಘಂ || ೨೦||

ವಿ|| ಇಲ್ಲಿ ಬಿದ್ದಲರನಾಯ್ದುಕೊಳ್ ಗಿಡುವನಲುಗವೇಡಾ, ಎಂದು ವಿಧಿನಿಷೇಧಂಗಳಂ ಪೇಳ್ವುದರಿಂ ಎಲೆಸಖಿ ಚೌರ್ಯರತದೊಳ್ ವಲಯಶಬ್ದಂ ಮಾಡಲ್ಯೋಗ್ಯಮಲ್ತೆಂಬ ನಿಷೇಧಾಂತರಂ ತೋರಿಸಲ್ಪಟ್ಟಿತು—

ವಿಧಿಯಲ್ಲಿ ಅನುಭಯವೆಂತೆಂದೊಡೆ.

ಕಂ|| ಕಡು ಬಡನಡುವಿನ ಪೊಸಪೊಂ |
ಗೊಡವೊಲೆಗಳನಾಂತ ನೀರೆ ಮೆಲ್ಲನೆ ನೀಂ ಮೆ ||
ಲ್ಲಡಿಯಿಡು ಬಹುಪ್ರಯಾಸದೆ |
ಪಡೆದಂ ಕರಕುಶಲನಪ್ಪ ಧಾತ್ರಂ ನಿನ್ನಂ || ೨೧||

ವಿ|| ಇಲ್ಲಿ ಮೆಲ್ಲಡಿಯಿಡು, ಯೆಂದು ವಿಧಿಯಂ ಪೇಳ್ವುದರಿಂ ಧ್ವನಿರೂಪಮಪ್ಪ ವಿಧಿನಿಷೇಧಂಗಳಿಲ್ಲಂ. ಮತ್ತೆ ವರ್ಣನಾಮಾತ್ರಂ (ಪ್ರತೀಯತೇ) ತೋರ್ಪುದು.

ನಿಷೇಧದಲ್ಲನುಭಯವೆಂತೆಂದೊಡೆ.

ಚಂ|| ವದನದ ಕಾಂತಿಯಿಂದೆ ಶಶಿಕಾಂತಿಯನೋವದೆ ಗೆಲ್ದು ನೀಱಿ ಪೋ।
ಗದೆ ತಿರುಗಜ್ಞ್ಮಬುದ್ಧಿಗೆಡೆಯಾದಳೆ ನೀನಭಿಸಾರಿಕಾಜನ ||
ಕ್ಕೊದವಿದ ವಿಘ್ನಮಂ ನೆಱೆಯೆ ಮಾಡುತುಮಿರ್ದಪೆ ಅಕ್ಕಟಕ್ಕಟಾ |
ಸುದತಿಯ ರೂಪೆಯಾಗಿ ಕುಲಕಂಟಕಿಯಪ್ಪುದು ಪೆಣ್ಗೆ ನೀತಿಯೇ || ೨೨||

ವಿ|| ಇಲ್ಲಿ ನೀಂ ತಿರುಗೆಂಬ ನಿಷೇಧವಾಕ್ಯದಿಂ ವ್ಯಙ್ಗ್ಯಂ ವಿಧಿನಿಷೇಧಮಲ್ತು, ಮತ್ತೆ ಮುಖಚಂದ್ರಕಾಂತಿ ವರ್ಣನಾಮಾತ್ರಂ (ಪ್ರತೀಯತೇ)ತೋರ್ಪುದು.

ವಿಧಿನಿಷೇಧದೊಳನುಭಯಮೆಂತೆಂದೊಡೆ.

ಕಂ|| ಎಲೆ ದಕ್ಷಿಣ್ಯನಿಡುಸುಯ್ಯುಂ ।
ಸಲೆ ರೋದನಮುಂ ಸಮಂತು ಪೊರ್ವಗಳೆ ಬರ್ಪಾ ||
ಲಲನೆಯೆನಗಕ್ಕೆ ನಿನಗಾ ।
ಗಲೆ ಬೇಡವಳಿಂದೆ ಬಱಿಕೆ ನಿನಗಕ್ಕೆ ವಲಂ || ೨೩||

ವಿ|| ಇಲ್ಲಿ ಯೆನಗೆ ಶ್ವಾಸರೋದನಂಗಳಾಗಲಿ, ನಿನಗೆ ಆಗಬೇಡ, ಆಕೆಯಿಲ್ಲದಿರೆ ನಿನಗಾಗಲಿ. ಎಂದು ವಿಧಿನಿಷೇಧಂಗಳಂ ಪೇೞ್ವುದಱಿಂ ವ್ಯಙ್ಗ್ಯಂ ವಿಧಿಯುಮಲ್ತು ನಿಷೇಧಮುಮಲ್ತು, ಮತ್ತೆ ಕಪಟವಲ್ಲಭನ ನಿಂದಾರೂಪಂ ತೋಱಲ್ಪಟ್ಟಿತು.

ವಿಧಿ ನಿಷೇಧಮಲ್ಲದುವಱೊಳ್ ಅನುಭಯಮೆಂತೆಂದೊಡೆ.

ನವನಖ ರೇಖಾಂಕಿತ ತನು ।
ವವನಿದ್ರಾಲಸ ವಿಲೋಚನಂ ನಲ್ಲನೆ .....|| (1)
........................... |
....................................|| ೨೪||

.............................|
..............................||
...................................|
...ನ್ನೆ ನೀವೊರ್ಱಿಯ ವಾರಿಯನೀಗಳೆ ತೀವಿ ತಂದಪೆಂ || ೨೫||

(1) ಇಲ್ಲಿಂದ ಮುಂದೆ ಮೂಲಗ್ರಂಥದಲ್ಲಿ ಒಂದು ಓಲೆಯು ಭ್ರಷ್ಟವಾಗಿರುವುದರಿಂದ ಸ್ವಲ್ಪಗ್ರಂಥಭಾಗವು ಗಳಿತವಾಗಿದೆ, ಆಗಳಿತವಾದ ಗ್ರಂಥಭಾಗಕ್ಕೆ ಚುಕ್ಕಿಗಳನ್ನು ಹಾಕಿ ಸ್ವಲ್ಪ ಸ್ಥಳವನ್ನು ಬಿಟ್ಟಿದೆ.

ವಿ|| ಇಲ್ಲಿ ಚಾತುರ್ಯರತಗೋಪನವಱಿಯಬರುತಿರ್ದಪುದು.

ಪ್ರತಿಪಾದ್ಯ ವಿಶೇಷದೊಳೆಂತೆಂದೊಡೆ.

ಲಕ್ಷ್ಯಂ.

ಚಂ|| ಉರದೆ ವಿಲಿಪ್ತಚಂದನದ ನಾನುಮೆ ಪೋಯ್ತಧರಂ ಬೆಳರ್ತುದೋ ।
ಸರಿಸಿದುದಂಜನಂ ನಯನದಿಂ ಪುಳಕೋಜ್ಜ್ವಳಮಾಯ್ತು ಮೆಯ್ಯಿದೇ ॥
[ನರಿಯದೆ ದೂತಿ ಬಂಧುಜನಪೀಡೆಯ] ವಾಪಿಗೆ ಮಿಾಯ ಪೋದೆ ನೀಂ ।
ಕರವೂಡೆ ಪೋದುದಿಲ್ಲಧಮನಲ್ಲಿಗೆ ಪೇೞ್ [ಪುಸಿದಿಂತು] ಬರ್ಪರೇ || ೨೭||

ವಿ|| ಇಲ್ಲಿ ದೂತಿಯಿಂದೆ ನಾಯಕನ ಸಂಭೋಗಂ ಪೇೞಿಸಪಟ್ಟುದು.

ಕಾಕುವಿನಿಂದೆಂತೆಂದೊಡೆ.

ಚಂ|| ದ್ರುಪದನರೇಂದ್ರಜಾತೆವೆರಸುಗ್ರತರಾಟವಿಯೊಳ್ ತೊೞಲ್ದುಳ ।
ಲ್ದುಪಚಿತವಲ್ಕಲಂದಳೆದು ಪೇಸದೆ ಮತ್ಸ್ಯನೃಪಾಲಸೇವೆಯೊಳ್ ॥
ಕೃಪಣತೆವೆತ್ತ ನಮ್ಮೊಡನೆ ಧರ್ಮಸುತಂ ಮಿಗೆ ಖಾತಿಗೆಯ್ಯುತಿ ।
ರ್ದಪನುಱದಿಂನೆಗಂ ಕುರುಧರಾಧಿಪನೊಳ್ ಖತಿಗೆಯ್ಯನೊರ್ಮೆಯುಂ ||

ವಿ|| ವ್ಯಾಕುಲಮೆನ್ನಲ್ಲಿ ಯೋಗ್ಯಮಲ್ತು, ಕುರುಕುಲನಲ್ಲಿ ಯೋಗ್ಯಮೆಂದು ಕಾಕುವಿನಿಂ ಪ್ರಕಾಶಿಸಲ್ಪಟ್ಟುದು.

ವಾಕ್ಯವಿಶೇಷದೊಳೆಂತೆಂದೊಡೆ.

ಕಂ|| ನಲಪಿಂ ಮುಗಳಂ ಕೊಟ್ಟಂ ।
ಸಲೆ ಪೞಿಕ್ಕಿಗೆ ಪಾವನಿತ್ತನಾಂ ಸೇತುವನೇ ॥
ಕಲಸದೆ ಕಟ್ಟಿದಪನೆನುತ ।
ಜಲನಿಧಿ ಕಂಪಿಸುವ ತೆಱದೆ ಕಂಪಿಸುತಿರ್ಕುಂ || ೨೯||

ವಿ|| ಇಲ್ಲಿ ನಾರಾಯಣನೆಂಬುದು ಅಱಿಯಲ್ಪಟ್ಟುದು.

ವಾಚ್ಯವಿಶೇಷದೊಳೆಂತೆಂದೊಡೆ.

ಲಕ್ಷ್ಯಂ.

ಚಂ|| ಸುರುಚಿರ ನರ್ಮದಾತಟದೊಳೊಪ್ಪುವ ಬಾೞಿವನಂಗಳೊಳ್ ।
ಸ್ಫುರಿತ [ಲತಾನಿಕುಂಜ] ತತಿ ರಾಜಿಸುವೀಯೆಡೆಯೊಳ್ ಸಮಂತು ನಿ ||
ರ್ಭರರತಮಿತ್ರವಾಯು ಸುೞಿಗೊಂಡಪುದಿಂತಿವಱಗ್ರದಲ್ಲಿ ನಿ ।
ಷ್ಠುರನೆನಿಸಿರ್ಪಕಾಲಕುಪಿತಂ ಮದನಂ [ಚಲದಿಂ] ತೊಳಲ್ದಪಂ || ೩೦||

ವಿ|| ಇಲ್ಲಿ ಸುರತನಿಮಿತ್ತಮಾಗಿ ಪ್ರವೇಶಿಸೆಂಬುದು ವ್ಯಙ್ಗ್ಯಂ.

ಅನ್ಯಾಸತ್ತಿಯೊಳಿಂತೆಂದೊಡೆ। (1)

.................................. ||
.............................. |
.................................. || ೩೧||

.................................. |
.................................. ||
..... ................... ......... |
..... ............ ........... .. || ೩೨||

ದೇಶವಿಶೇಷದೊಳಿಂತೆಂದೊಡೆ.

ಕಂ|| ಎಲೆ ಕೆಳದಿಯುರಿರ ನಾಸೀ |
ನೆಲದಿಂದಂ ಪಜ್ಜೆಯಿಕ್ಕಲಾಱಂ ಪ್ರವಂ ||
ನಲವಿಂ ಕುಯ್ದುಪೆನಿಲ್ಲಿಯ |
ವಿಲಸದ್ವಾಟಿಯೊಳೆ ಚಲಿಸಿ ನೀಂ ಪೂಗೆಯ್ಯಿಂ || ೩೩ ||

ವಿ|| ಇಲ್ಲಿ ಆರುಮಿಲ್ಲದಿರ್ಪೀ ಪ್ರದೇಶಕ್ಕೆ ಗುಪ್ತವಿಟನಂ ನೀಂ ಬೇಗಂ ಕಳಿಪೆಂಬುದು ತೋಱಲ್ಪಡುಗುಂ.

ಕಾಲವಿಶೇಷದೊಳಿಂತೆಂದೊಡೆ.

ಲಕ್ಷ್ಯಂ.

ಕಂ|| ಮಾತಾಪಿತೃಗಳಧೀನದಿ |
ನೋತಿರ್ಪನಿಯನೆ ಪರೋರ್ವಿಗೆಯ್ದುವಯ್ ಪೋ ಪೋ ||
ಗೇತದ್ದಿನದೊಳಭಾಗ್ಯೆಯು |
ಮಾತಂ ವಾರ್ತೆಯೊಳೆ ಕೇಳ್ದಪಯ್ ಬಱಿಕೆನ್ನಂ || ೩೪||

(1) ಇಲ್ಲಿ ಅನ್ಯಾಸತ್ತಿ ಮತ್ತು ಪ್ರಸ್ತಾವದ ಉದಾಹರಣಗಳು ಬಿಟ್ಟುಹೋಗಿವೆ. ಮೂಲದಲ್ಲಿ ಈವಿಷಯದ ಓಲೆಯು ಭ್ರಷ್ಟವಾದಂತಿಲ್ಲ ಲೇಖಕನು ಪ್ರಮಾದದಿಂದ ಬಿಟ್ಟಂತೆ ತೋರುವುದು—ಈ ಪ್ರಕರಣವೆಲ್ಲವೂ ಹೇಮಚಂದ್ರನ ಕಾವ್ಯಾನುಶಾಸನದ ಸಂಪೂರ್ಣಪರಿವರ್ತನವಾಗಿರುವುದರಿಂದ ಮೂಲದಲ್ಲಿರುವ ಅನ್ಯಾಸತ್ತಿ ಮತ್ತು ಪ್ರಸ್ತಾವದ ಉದಾಹರಣಗಳೆರಡೂ ಈಸ್ಥಲದಲ್ಲಿರಬೇಕೆಂದು ತಿಳಿಯಬರುವುದು. ಅದರಿಂದ ಮೂಲದಲ್ಲಿ ಸ್ವಲ್ಪಸ್ಥಳವನ್ನು ಬಿಟ್ಟುಚುಕ್ಕಿಗಳನ್ನು ಹಾಕಿದೆ.

ವಿ|| ಇಲ್ಲಿ ವಸಂತಕಾಲದಲ್ಲಿ ನೀಂ ಪೋದೆಯಾದೊಡೆ ನಾನುೞಿವುದಿಲ್ಲಂ ನೀನೞಿವೆಯೊ ಉೞಿವೆಯೋ ಎಂಬುದಿಂತು ವ್ಯಙ್ಗ್ಯಂ.

ಚೇಷ್ಟಾವಿಶೇಷದೊಳೆಂತೆಂದೊಡೆ.

ಉ|| ದ್ವಾರದುಪಾಂತದೊಳ್ ಪದೆದು ನಿಂದನನೆನ್ನನಭೀಕ್ಷಿಸುತ್ತೆ ವಿ |
ಸ್ತಾರಿತಜಾನುಯುಗ್ಮೆ ತೊಡೆಯುಂ ಮಗುೞ್ದೊಂದಿಸಿ ಜಂಚಲತ್ವಮಂ ||
ಬಾರಿಸಿ ನೇತ್ರದೊಳ್ ನುಡಿವುದಂ ಮಿಗೆ ನೂಣ್ಪು ಕುಚಾಗ್ರದಲ್ಲಿ ಸ |
ಯ್ರ್ತೀರೆ ಮುಸುಂಕಸಿಟ್ಟಗಲಿಸಿರ್ದ ಭುಜಂಗಳನೊಂದು ಗೂಡಿದಳ್|| ೩೫||

ವಿ|| ಇಲ್ಲಿ ಚೇಷ್ಟೆಯಿಂ ಗುಪ್ತಕಾಮುಕನ ವಿಷಯಮಾಗುಳ್ಳ ಅಭಿಪ್ರಾಯ ವಿಶೇಷಂ ವ್ಯಙ್ಗ್ಯಂ. (1)

ಇಂ ಲಕ್ಷ್ಯಾರ್ಥದೊಳೆಂತೆಂದೊಡೆ.

ಚಂ|| ಕೆಳದಿ ಮನೋಜ್ಞನಂ ಪಡೆದು ಸಾಧಿಪೆ ನೀನೆನಗಾಗಿ ನೀಂ ಕರಂ ।
ಬಳಲುತುಮಿರ್ಪ ಕಾರ್ಯಮದು ನಿನ್ನಯ ಭಾರಕೆ ಸಾಟಿಯಾಗಿ ಕ ||
ಣ್ಗೊಳಿಪವೊಲೆನ್ನ ನೇಹಕೆಣೆಯಾಗಿ ನೆಗೞ್ತೆಯ ನೆಮ್ಮವಂತೆವೋಲ್ ।
ವಿಳಸಿತಕಾರ್ಯಮಂ ನಲವಿನಿಂ ರಚಿಸಿರ್ಪವೊಲಾದುದುೞ್ತೆಯಿಂ || ೩೬||

ವಿ|| ಎಂಬಲ್ಲಿ ಮುನಿದಿನಿಯನಂ ತಿಳಿಪಲ್ ಪೋಗಿ ತಿರಿಗಿ ಬಂದ ಸಖಿಯ ಸಂಭೋಗ ಚಿಹ್ನಮಂ ಕಂಡು ನಲ್ಲನೊಳ್ ನೆರೆದಳೆಂದು ಅಱಿದು ನಾಯಿಕೆ ನುಡಿದ ತಿರಸ್ಕಾರವಚನಂ, ಆದೞಿಂದಪಕಾರಮಂ ಮಾಡಿದ ಸಖಿಯೊಳುಪಕಾರ ಪರಂಗಳಪ್ಪ ವಚನಂಗಳನುಚಿತಮಾಗಿ ಮುಖ್ಯಾರ್ಥಬಾಧೆಯಾಗಿ(ವ್ಯಾಘಾತ ಸಂಬಂಧದವೊಲ್.) ವೈರಸಂಬಂಧದಿಂ ಸವತಿಯೆಂಬುದು ಲಕ್ಷ್ಯಂ. ಈ

(1) ಇದಕ್ಕೆ ಮೂಲವಾದ ಕಾವ್ಯಾನುಶಾಸನದಲ್ಲಿ ಹೇಳಿರುವ ಇನ್ನೂ ಕೆಲವು ವಿಷಯಗಳು ಇಲ್ಲಿ ಬಿಟ್ಟುಹೋಗಿವೆ. ಅದನ್ನು ವಾಚಕರ ಅನುಗಾಹನೆಗಾಗಿ ಸೂಚಿಸಿದೆ
ಈವಿಧಮಾಗಿ ಪೇೞ್ದ ವಕ್ತ್ರಾದಿಗಳ ದ್ವಿಕಾದಿಯೋಗಂಗಳೊಳಂ ವ್ಯಙ್ಗ್ಯಮನೂಹಿಸಿಕೊಳ್ವುದು.

ವಕ್ತೃಬೋದ್ಧವ್ಯಯೋಗದೊಳೆಂತೆಂದೊಡೆ —

ಒಱಗುವಳತ್ತೆ.................(ಹಿಂದಣ ೧೪ ನೆಯ ಪದ್ಯ)

ಇಲ್ಲಿ ವಕ್ತೃಬೋದ್ಧವ್ಯ ಪರ್ಯಾಲೋಚನೆಯಿಂದಲ್ಲಿ ಮಲಗೆಂಬ ವಿಧಿರೂಪಂ ವ್ಯಙ್ಗ್ಯ ಮಾದುದು. ಇಂತು ತ್ರಿಕಾದಿಯೋಗನುಂ ತಾನೆ ಊಹಿಸಿಕೊಳ್ವುದು—ಇವೆಲ್ಲಂ ಮುಖ್ಯಾರ್ಥ ವ್ಯಙ್ಗ್ಯಕ್ಕೆ ಉದಾಹರಣಂಗಳ್.

ಲಕ್ಷ್ಯಾರ್ಥದಿಂ ಸಿನ್ನಿಂದೆ ಪಗೆತನಮಾಚರಿಸಲ್ಪಟ್ಟುದು, ಅದನಾಶ್ರಯಿಸಿದ ವ್ಯಂಜನೆಯಿಂದನಿಯನಪರಾಧಂ ತೋಱಲ್ಪಟ್ಟುದು. ಇದು ಲಕ್ಷ್ಯಮೂಲ ವ್ಯಙ್ಗ್ಯಂ.

**ವ್ಯಙ್ಗ್ಯಾರ್ಥದೊಳೆಂತೆಂದೊಡೆ.**

ಚಂ|| ಮದಗಜಮೌಕ್ತಿಕಂ ಕುಡುವುದಿರ್ದಪುವೇ ಎನೆ ಸೆಟ್ಟಿಗುಲ್ಲಸ |
ದ್ರದನವಿಹೀನವಕ್ತ್ರೆ ಮುದುವೇಡಿತಿ ಯುತ್ತರವಿತ್ತಳಣ್ಣ ಕೇಳ್ ||
ಸದಮಳಕೋಮಳಾಂಗಿ ಸೊಸೆ ಮಧ್ಯಮವಾಲಸೆ ಬಿಟ್ಟಮುಂಡೆಯುಂ |
ಪದುಳಿಸಿ ಕಟ್ಟಿದಂದಿನ ದಿನಂ ದೊರೆಕೊಳ್ವುದು ಮೌಕ್ತಿಕವ್ರಜಂ || ೩೭||

ವಿ|| ಇಲ್ಲಿ ಬಿಟ್ಟಮುಂಡೆಯುಂ ಕಟ್ಟಳೆಂಬುದಱಿನನವರತಕ್ರೀಡಾಸಕ್ತಿ ವ್ಯಙ್ಗ್ಯಂ ಅವಱಿಂ ಚತತಸಂಭೋಗದಿಂದಾಕೃಶತ್ವಂ ಧ್ವನಿಸಲ್ಪಟ್ಟಿತು —

I ಶಬ್ದಶಕ್ತಿಮೂಲವ್ಯಙ್ಗ್ಯಂ ಪದದೊಳ್, ವಾಕ್ಯದೊಳ್ ಪ್ರತ್ಯೇಕಮಾಗಿರ್ಕುಂ, ಮುಖ್ಯಶಬ್ದಶಕ್ತಿವ್ಯಙ್ಗ್ಯಂ (1) ಪದಂಗಳೊಳೆಂತೆಂದೊಡೆ—

ಕಂ|| ಅಸಮತರಭುಕ್ತಿಮುಕ್ತಿ |
ಪ್ರಸರಮನುರ ಮಾಡಲೆಸಗುವೇಕಾಂತಮನೊ ||
ಲ್ಪಿಸಿರ್ವೆಡೆಯೊಳ್ ತತ್ಪರಮಾ |
ದ ಸದಾಗಮಮಾರ್ಗೆ ಪುಟ್ಟಿಸದು ಮುದದೊದವಂ || ೩೮||

ವಿ|| ಇಲ್ಲಿ ಆವಳೋ ಒರ್ವಳ್ ಸಂಕೇತಮಂ ಮಾಡಬಾತನಂ ಮುಖ್ಯವೃತ್ತಿಯಿಂ ಕೂಡಾಡುತಿರ್ಪಳ್. [ಎಂಬುದು ಸದಾಗಮಪದದಿಂದ ಪ್ರಕಾಶಿಸಲ್ಪಡುವುದು ವೈಸಾದೃಶ್ಯವಿಪುರ್ಣಱಿಂದುಪಮಾಲಂಕಾರ ವ್ಯಙ್ಗ್ಯವಿಲ್ಲಂ|

1 ಈಸಂದರ್ಭದಲ್ಲಿ ಇದಕ್ಕೆ ಮೂಲಮಾದಕಾವ್ಯಾನುಶಾಸನದಲ್ಲಿಕವಿಯು—ವ್ಯಙ್ಗ್ಯಭೇದಗಳಂ ಪೇೞ್ವೆಂ—ಎಂದು ಆರಂಭಿಸಿ "ವ್ಯಙ್ಗ್ಯವು ಶಬ್ದಾರ್ಥಶಕ್ತಿಮೂಲಕವಾದುದು. ಎಂದು ಹೇಳಿ ನಾನಾರ್ಥವುಳ್ಳ ಮುಖ್ಯಶಬ್ದಕ್ಕೆ ಸಂಸರ್ಗಾದಿಗಳಿಂದೆ" ಅಮುಖ್ಯಶಬ್ದಕ್ಕೆ ಮುಖ್ಯಾರ್ಥಬಾಧಾದಿಗಳಿಂದೆ ಸ್ವವ್ಯಾಪಾರವು ನಿಯಮಿತವಾಗಲು ವಸ್ತ್ವಲಂಕಾರಗಳು ಮತ್ತು ವಸ್ತುವು ವ್ಯಙ್ಗ್ಯವಾಗುವುದು ಶಬ್ದಶಕ್ತಿಮೂಲವ್ಯಙ್ಗ್ಯವೆನಿಸಿತು. ಅದು ಪದದೊಳ್ ವಾಕ್ಯದೊಳಮುಂಟು ಎಂಬ ಸೂತ್ರವನ್ನುದಹರಿಸಿ—ಅನೇಕಾರ್ಥಮುಳ್ಳ ಮುಖ್ಯಶಬ್ದದ ಅಭಿಧಾವ್ಯಾಪಾರದ ನಿಯಮನಕ್ಕೆ ಹೇತುವಾದ ಸಂಸರ್ಗಾದಿಗಳನ್ನು ಸೋದಾಹರಣವಾಗಿ ಹೇಳಿ—ಮುಖ್ಯಶಬ್ದಶಕ್ತಿಮೂಲ ವ್ಯಙ್ಗ್ಯವು ಪದದೊಳೆಂತೆಂದೊಡೆ ಎಂದು ಹೇಳಿರುವನು. ಈಸಾಳ್ವಕವಿಯು ಆದಿಯಲ್ಲೇ ಸಂಸರ್ಗಾದಿಗಳನ್ನು ಸೋದಾಹರಣವಾಗಿ ನಿರೂಪಿಸಿ ಬಳಿಕ ವ್ಯಙ್ಗ್ಯಭೇದಗಳನ್ನು ಇಲ್ಲಿ ಉದಹರಿಸಿರುವನು.

